# ಪರಿವಿಡಿ

* * *



---

1939ರಲ್ಲಿ ಭಾರತೀ ಗ್ರಂಥಮಾಲೆಯ ಮೂಲಕ ಪ್ರಕಟಗೊಂಡ ಇದರ ಪ್ರತಿಗಳು ತೀರಿದ್ದರಿಂದ ಇದೀಗ ಈ ರೀತಿ ತಿರುಗಿ ಮುದ್ರಿಸಿದ್ದೇವೆ.

—ಪ್ರಕಾಶಕರು.

# ಚಿಗುರು

## ೧. ನರಸಿಂಹನ ದೇಶಾಭಿಮಾನ

೧

ನರಸಿಂಹಭಟ್ಟನೆಂದು ನನ್ನ ಮಿತ್ರನ ಹೆಸರು. ಅವನ ಸ್ವಭಾವದಲ್ಲಿ ಸಂಶಯದ ಕಂಪನವೆಂಬುದಿಲ್ಲ. ಹೆಚ್ಚಿನ ವಿಷಯಗಳಲ್ಲಿ ಅವನ ಅಭಿಪ್ರಾಯವೆಲ್ಲವೂ ನಿಶ್ಚಿತವಾದೊಂದು ಕೊನೆಯನ್ನು ಮುಟ್ಟಿಯೇ ಇದ್ದುವು.

ನರಸಿಂಹನ ಮಿತ್ರವರ್ಗವು ನನ್ನನ್ನು ಆತನ ಸ್ನೇಹಿತನೆಂದು ತಿಳಿದಿರುವುದೇ ಹೊರತು ನನ್ನ ಹೆಸರಿಗೆ ಸೊಪ್ಪುಹಾಕದು. ಅದೃಷ್ಟವಶಾತ್ ನನಗೆ ನನ್ನ ಹಿರಿಯರು ಸಾಕಷ್ಟು ಮಾಡಿಟ್ಟುದರಿಂದ ನನಗೊಂದು ವಿಧದ ಪ್ರಾಮುಖ್ಯತೆಯೇನೋ ದೊರೆಯುತ್ತಿತ್ತು. ವಂತಿಗೆ ವರಾಡಗಳನ್ನೆತ್ತುವಾಗ ನರಸಿಂಹನ ಅನುಯಾಯಿಗಳಿಗೆ ಇದೊಂದು ಬಹಳ ಅನುಕೂಲವೇ ಆಗುತ್ತಿತ್ತು.

ನನ್ನ ಸ್ವಭಾವವು ಬಲು ಅಸಡ್ಡೆಯದು. ಯಾವುದನ್ನೂ ಬಿಡದೆ ಮಾಡುವವನು ನಾನಲ್ಲ. ನನ್ನ ಮಿತ್ರನಾದರೂ ಹಿಡಿದ ಕಾರ್ಯಕ್ಕಾಗಿ ಎಡೆಬಿಡದೆ ಶ್ರಮಪಡುವವನು. ಆದರೆ ಈ ಸ್ವಭಾವ ಭಿನ್ನತೆಯು ನಮ್ಮ ಅನ್ಯೋನ್ಯತೆಗೆ ಕುಂದನ್ನುಂಟುಮಾಡಲಿಲ್ಲ. ಆದರೆ ಒಂದು ವಿಷಯದಲ್ಲಿ ಮಾತ್ರ ನರಸಿಂಹನಿಗೂ ನನಗೂ ವೈಷಮ್ಯವಿದ್ದಿತು. ಅವನು ನನ್ನನ್ನು ದೇಶಾಭಿಮಾನರಹಿತನೆಂದೇ ಭಾವಿಸುತ್ತಿದ್ದನು. ಇದು ಬಹಳ ವಿಷಾದಕರವೇ ಸರಿ. ಯಾಕಂದರೆ, ನರಸಿಂಹನ ಅಭಿಪ್ರಾಯದಂತೆ ಅವನು ಸತ್ಯವೆಂದು ಘೋಷಿಸುವುದೆಲ್ಲಾ ವೇದವಾಕ್ಯ. ನನಗಿರುವ ನನ್ನ ದೇಶಪ್ರೇಮವನ್ನು ವ್ಯಕ್ತಗೊಳಿಸುವ ಇತರ ವಿಷಯಗಳಿದ್ದರೂ, ನರಸಿಂಹನ ಪಕ್ಷೀಯರ ಉಜ್ವಲ ರಾಷ್ಟ್ರೀಯತೆಯ ಚಿಹ್ನೆಯ ಪೋಷಾಕನ್ನು ಹಾಕಿಕೊಳ್ಳಲು ನಾನು ಸಮ್ಮತಿಸದುದರಿಂದ ಅವುಗಳಿಗೆಲ್ಲಾ ನರಸಿಂಹನ ಉಗ್ರ ತಿರಸ್ಕಾರ.

ನನ್ನ ಮಿತ್ರನ ಉತ್ಕೃಷ್ಟ ಉದಾಹರಣೆಯು ಕಣ್ಣೆದುರಿಗೇನೇ

ಇದ್ದರೂ ಅವನು ನನ್ನನ್ನು ಎಷ್ಟೊಂದು ಬಲವಂತಗೊಳಿಸಿದರೂ ನಾನು ಖದ್ದರನ್ನು ಧರಿಸಲಿಲ್ಲ. ಅದರಲ್ಲೇನಾದರೂ ದೋಷವಿದೆಯಂದಲ್ಲ; ಅಥವಾ ನಾನು ಉಡುಗೆತೊಡಿಗೆ ವಿಷಯದಲ್ಲಿ ಬಲು ಡೌಲಿನವನೆಂದೂ ಅಲ್ಲ. ನನಗೇನಾದರೂ ವಸ್ತ್ರವೊಂದು ಮೈಮೇಲಿದ್ದರೆ ಸರಿ. ಆ ಕ್ರಮ, ಈ 'ಫೆಶನೆಂ'ತ ಪೋಷಾಕಿನ ಯಾವ ತರದ ನಿಯಮವನ್ನೂ ನಾನನುಸರಿಸು ತ್ತಿದ್ದಿಲ್ಲ. ಖದ್ದರ್ ಪ್ರಚಾರಕ್ಕೆ ಬರುವ ಮೊದಲು ಈ ನನ್ನ ಅಸಡ್ಡೆಗಾಗಿ ನರಸಿಂಹನು, 'ನಿನ್ನೊಂದಿಗೆ ನನಗೆ ಹೊರಗೆ ಹೋಗಲು ನಾಚಿಕೆಯಾಗು ತ್ತದೆ'ಂದು ಹೀಯಾಳಿಸಿ ಹಂಗಿಸುತಿದ್ದನು. ಇದಕ್ಕಾಗಿ ಸಾರ್ವಜನಿಕ ಸಮಾರಂಭಗಳಿಗೆ ಹೋಗುವಾಗ ನನ್ನನ್ನು ಸಂಗಡ ಕರೆದೊಯ್ಯಬೇಕೆಂಬ ಜವಾಬ್ದಾರಿಯಿಂದ ನರಸಿಂಹನನ್ನು ನಾನು ಮೊದಲೇ ವಿಮುಕ್ತನನ್ನಾಗಿ ಮಾಡಿದ್ದೆನು.

ಈಗ ಕಾಲಚಕ್ರವು ಸಂಪೂರ್ಣ ಪರಿವರ್ತಿತವಾಗಿರುವುದು. ಆದರೆ ನನ್ನ ದುರ್ದೈವವು ದೊಡ್ಡ ಅಪರಿವರ್ತನವಾದಿ. "ನಿನ್ನೊಂದಿಗೆ ನನಗೆ ಬಹಿರಂಗವಾಗಿ ತಿರುಗಲು ನಾಚಿಕೆಯಾಗುತ್ತದೆ"ಂಬ ನರಸಿಂಹನ ನಿಂದೆಯು ಇನ್ನೂ ತಪ್ಪಲಿಲ್ಲ. ಮೊದಲು 'ಹೋಮ್‌ರೂಲ್' ಚಳವಳ ಗಾರರಾದ 'ಥಿಯೋಸೊಫಿಸ್ಟ'ರ ಪೋಷಾಕನ್ನು ತೊಡದುದಕ್ಕಾಗಿ ಹಿಯಾ ಳಿಕೆಯಾದರೆ ಈಗ ಉಜ್ವಲ 'ನೇಶನಲಿಸ್ಟಾ'ಗಿರುವ ನರಸಿಂಹನ ಮತ್ತು ಅವನ ಪಕ್ಷೀಯರ ರಾಷ್ಟ್ರಭಕ್ತಿಯ ಏಕಮಾತ್ರ ನಿಶಾನಿಯಾಗಿರುವ ಖದ್ದರನ್ನು ಧರಿಸದುದಕ್ಕಾಗಿ!

ಈ ದೋಷವು ನನ್ನ ಸ್ವಭಾವದಲ್ಲಿ ಬಲವಾಗಿ ಬೇರುಬಿಟ್ಟಿದೆ. ಯಾವುದೊಂದು ಪ್ರತ್ಯೇಕ ಪಕ್ಷಪಂಥವಾದಿಗಳ ಚಿಹ್ನೆಯನ್ನು ಇಚ್ಛಾ ಪೂರ್ವಕವಾಗಿ ದೇಹದಲ್ಲಿ ಪ್ರದರ್ಶನ ಮಾಡಿಕೊಂಡಿರಲು ನನ್ನ ಮನ ಸ್ಸೊಡಂಬಡದು. ನನ್ನೀ ಭೀರುತನವು ನರಸಿಂಹನ ಮೈತ್ರಿರಂಗದಲ್ಲಿ ಅನೇಕ ವೇಳೆ ವಾಗ್ಯುದ್ಧಕ್ಕೆಡೆಗೊಡುತ್ತಿದ್ದಿತು. ಕೊನೆಗೆ ನನ್ನ ಜನ್ಮವೇ ಹಾಗೆಂದು ನರಸಿಂಹನು ನನ್ನನ್ನು ನನ್ನಷ್ಟಕ್ಕೆ ಬಿಡಲೊಪ್ಪಬೇಕಾಗಿದ್ದಿತು. ಅವನ ಮನಸ್ಸೆಂಬುದು, ಗರ್ಜನೆ ತರ್ಜನೆಯಿಂದ ತನ್ನ ಮಾರ್ಗದಲ್ಲಿರುವ ಬಂಡೆಯನ್ನು ಸುತ್ತಿ ಸುತ್ತಿ ಆದನ್ನೂ ತನ್ನೊಡನೆ ಹರಿಯುವಂತೆ ಮಾಡ

ಲೆಳಸುವ ಪರ್ವತ ಪ್ರವಾಹದಂತಾಗಿದ್ದಿತು. ತನ್ನ ದೃಷ್ಟಿಗಿಂತ ಪ್ರತ್ಯೇಕ ವಾದ ಭಾವನಾದೃಷ್ಟಿಯ ಸಂಪರ್ಕವು ನರಸಿಂಹನನ್ನು ಉಗ್ರನರಸಿಂಹ ನನ್ನಾಗಿ ಮಾಡಿಬಿಡುತ್ತಿದ್ದಿತು.

ನಾವು ನಿನ್ನೆ ತಿರುಗಾಡಹೊರಡಲು ಸಿದ್ಧರಾಗುವಾಗ ನರಸಿಂಹನು ಖದ್ದರಿನದಲ್ಲದ ನನ್ನ ಪೋಷಾಕನ್ನು ನಿಷೇಧಿಸಿದುದು ಮೃದುತ್ವಪ್ರಮಾಣ ವನ್ನು ಬಹಳವಾಗಿ ಮಿಕ್ಕಿದ್ದಿತು. ದುರ್ದೈವವಶಾತ್ ನನಗೆ ನನ್ನ ಬುದ್ಧಿ ಶಕ್ತಿಯಲ್ಲಿದ್ದ ಅಹಂಭಾವವು ನರಸಿಂಹನನ್ನು ಚರ್ಚೆಗೆ ಕೆಣಕುವಂತೆ ಮಾಡಿತು. ಅದು ನಿಷ್ಠುರವೂ ವ್ಯರ್ಥವೂ ಆಗಿದ್ದಿತು. ನನ್ನ ಪ್ರತಿವಾದವು ನರಸಿಂಹನಲ್ಲಿ ಆಕ್ರೋಶವನ್ನುಂಟುಮಾಡಿತು. ಕ್ರೋಧಾಂಧನಾಗಿ ಅವನು ಹೀಗೆಂದನು ಗಂಗಾನದಿಯ ಪವಿತ್ರೋದಕದಲ್ಲಿ ಮುಳುಗುವಷ್ಟರ ಅಂಥ ನಂಬಿಕೆಯು ಖದ್ದರ್ ಧರಿಸುವುದರಲ್ಲೂ ಉಂಟಾದರೆ ಅದು ಮಾತೃ ಭೂಮಿಯ ಭಾಗ್ಯೋದಯವೆನ್ನಬೇಕು. ವಿಚಾರವು ಘನೀಕೃತವಾಗಿ ಆಚಾರವಾಗುವುದು. ವಿಶೃಂಖಲಭಾವನೆಗಳು ಪ್ರೇತಗಳಂತಿದ್ದು ರೂಢಿ ಯಲ್ಲಿ ಶರೀರವನ್ನು ತಳೆಯುತ್ತವೆ. ಆಗ ಮಾತ್ರ ಅವುಗಳಿಂದ ಘನ ಕಾರ್ಯವಾಗುತ್ತದೆ. ಮತ್ತು ಅವುಗಳು ಸಂಶಯವಾತಾವರಣದಲ್ಲಿ ತೇಲಾಡುವುದನ್ನು ನಿಲ್ಲಿಸುತ್ತವೆ."

ಈ ಬುದ್ಧಿವಂತಿಕೆಯ ಮಾತು ದೇಶಭಕ್ತ ಶ್ರೀನಿವಾಸರಾಯರ ದೆಂದೂ, ಅವುಗಳ ಆವರಣ ಚಿಹ್ನೆಯನ್ನು ಮಾತ್ರ ಅಳಿಸಿ ನರಸಿಂಹನು ತನ್ನದನ್ನಾಗಿ ಮಾಡಿ ಹೇಳಿರುವನೆಂದೂ ನಾನು ಕೂಡಲೇ ಕಂಡು ಕೊಂಡೆನು. ಮೌನವು ವೈರದ ಬಾಯಿ ಮುಚ್ಚಿಸುವುದೆಂಬ ಗಾದೆಯನ್ನು ಮಾಡಿದವನು ಪ್ರಾಯಶಃ ಮಿತ್ರರಿಲ್ಲದವನಿರಬೇಕು. ನಾನು ನರಸಿಂಹ ನಿಗೆ ಪ್ರತ್ಯುತ್ತರವನ್ನೀಯದೆ ಸುಮ್ಮನಿದ್ದಾಗ ಅವನಿಗೆ ಮತ್ತೂ ಸಿಟ್ಟೇರು ತ್ತಿದ್ದಿತು. "ನಿನ್ನ ಜಾತಿಭೇದ ನಿಷೇಧವೆಂಬುದು ಬರೀ ಬಾಯಿಯಲ್ಲಿ ಮಾತ್ರ. ನಾವಾದರೆ ನೋಡು! ಅದನ್ನು ಆಚರಣೆಯಲ್ಲಿ ತಂದು ನಮ್ಮ ಭಿನ್ನಭೇದಗಳ ಮೇಲೆಲ್ಲಾ ಏಕ ಪ್ರಕಾರವಾದ ಬಿಳಿತೊಡಿಗೆಯನ್ನು ಹಾಕಿ ಮುಚ್ಚಿಬಿಡುತ್ತೇವೆ" ಎಂದು ನರಸಿಂಹನು ಜರೆಯತೊಡಗಿದನು.

ಜಾತಿಭೇದದ ನಿಷೇಧವು ನಿಜವಾಗಿಯೂ, ಬ್ರಾಹ್ಮಣೇತರರ

ಮಾಂಸಾಹಾರವನ್ನು ರುಚಿಯಿಂದ ತೆಗೆದುಕೊಳ್ಳುವಾಗ ಬಾಯಿಯಲ್ಲಿಯೇ ಆರಂಭವಾಯಿತೆಂದು ನಾನು ನರಸಿಂಹನಿಗೆ ಉತ್ತರ ಕೊಡುವುದರಲ್ಲಿದ್ದೆನು. ಆದರೆ ಈ ಉತ್ತರವು ಮಾತಿಗೆ ಬಾರದೆ ಮನಸ್ಸಿನಲ್ಲೇ ಉಳಿಯಿತು. ಅದರ ಚಳವಳವೆಲ್ಲಾ ಆಂತರಿಕವಾಗಿಯೇ ನಡೆದುಬಿಟ್ಟಿತು. ಬಾಹ್ಯ ಹೊದಿಕೆಯು ವೈಷಮ್ಯಗಳನ್ನು ಮರೆಮಾಡುವುದೇ ಹೊರತು ನಿವಾರಿಸಲಾರದು; ಎಂಬೀ ನನ್ನ ಅಭಿಪ್ರಾಯವು ಪ್ರಕಾಶಗೊಳಿಸಲರ್ಹವಾಗಿತ್ತೆಂದು ನನಗೆ ಖಚಿತವಿದೆ. ನಾನು ಸ್ವಲ್ಪ ಅಳುಕಿದೆಯವನಾದುದರಿಂದ ಮೌನದ ತಾಟಸ್ಥ್ಯವೇ ಲೇಸೆಂದು ಸುಮ್ಮನಿದ್ದೆನು. ಯಾಕಂದರೆ ನಾನು ಮತ್ತು ನರಸಿಂಹನು ಖಾಸಗಿಯಾಗಿ ಮಾಡಿಕೊಳ್ಳುವ ಈ ಚರ್ಚೆಯ ಕೊಳಕು ವಸ್ತ್ರವನ್ನು ಅವನು ಸದಾ ಬಹಿರಂಗವಾಗಿ ಹೊಡೆದು ಬಡೆದು ತೊಳೆಯುತ್ತಿದ್ದನು. ಅವನ ಪಕ್ಷದವರಿಂದೆಲ್ಲಾ ನನ್ನ ತರ್ಕಕ್ಕೆ ಪ್ರತಿತರ್ಕದ ಮಾತುಗಳನ್ನು ಸಂಗ್ರಹಿಸಿಕೊಂಡು ಬಂದು, ಬರಬರನೆ ನನ್ನ ಮುಂದೆ ಅವುಗಳನ್ನು ಕಾರಿ ಪ್ರತ್ಯುತ್ತರಕ್ಕೆ ಕಾಯದೆ ನಡೆದು ಬಿಡುತ್ತಿದ್ದನು.

೨

ನಾವು ಇಂದು ದೇಶಭಕ್ತ ಶ್ರೀನಿವಾಸರಾಯರ ಟೀಪಾರ್ಟಿಗೆ ಹೋಗುವವರಿದ್ದೆವು. ಈ ಟೀಪಾರ್ಟಿಯಲ್ಲಿ ನನಗೆ ಇಂತಹದೇ ದೊರೆಯಲಿದೆಯೆಂದು ಖಂಡಿತ ಗೊತ್ತು. ನಾವು ನನ್ನ ಕಾರಿನಲ್ಲಿ ಮನೆಬಿಟ್ಟು ಸ್ವಲ್ಪ ದೂರ ಮಾತ್ರ ಸಂಚರಿಸಿದ್ದೆವು. ತರತರದ ರುಚಿಕರದ ಜಿಡ್ಡೆಣ್ಣೆಯ ತಿಂಡಿತಿನಸುಗಳನ್ನು ತಯಾರಿಸಿ, ಜನರಲ್ಲಿ ಅಜೀರ್ಣ ಹೆಚ್ಚಿಸಿ, ದುಡ್ಡು ಗಂಟುಕಟ್ಟಿ ಧನಿಕನಾಗಿರುವ ಶ್ರೀನಿವಾಸ ಭಟ್ಟನ 'ಮನೋಹರ ವಿಲಾಸ' ಎಂಬ ರಸ್ತೆಬದಿಯ 'ಹೋಟೆಲಿ'ನ ಬಳಿಗೆ ನಾವು ಮುಟ್ಟಿದೊಡನೆಯೇ ದೊಡ್ಡ ಗಲಾಟೆಯೊಂದು ನಮ್ಮನ್ನು ತಡೆಗಟ್ಟಿತು.

ಇಂದು ನಮ್ಮೂರಿನ ವಿಷ್ಣುಮೂರ್ತಿ ದೇವಸ್ಥಾನದ ಬಲು ವಿಜೃಂಭಣೆಯ ರಥೋತ್ಸವವಾಗಿತ್ತು. ಶಿವಳ್ಳಿ ಬ್ರಾಹ್ಮಣರೆಲ್ಲಾ ತಮ್ಮ ಪೂಜಾ ಸಾಹಿತ್ಯಗಳನ್ನು ಹಿಡಿದುಕೊಂಡು, ಹತ್ತಿರದ ದೇವಸ್ಥಾನಕ್ಕೆ ಹೋಗುತ್ತಿದ್ದವರು ಗುಂಪುಕಟ್ಟಿ ನಿಂತಿದ್ದರು. ಕೋಪಾವಿಷ್ಟರ ಬೊಬ್ಬೆ ಗದ್ದಲದೊಂದಿಗೆ ಹೊಡೆತದ ಶಬ್ದವು ಕೇಳಬಂದಿತು. ಯಾವನೋ ಕಣ್ಣೋಜಿ

ಯೊಬ್ಬನನ್ನು ಹಿಡಿದು ಜನರು ತಮ್ಮ ಕ್ರೋಧಾನಂದವನ್ನು ಅನುಭವಿಸುವರೆಂದೂ, ಈ ಸಂದರ್ಭದಲ್ಲಿ ಅವರಿಗೆ ತಮ್ಮ ಸಹೋದರನೊಬ್ಬನ ಕುರಿತು ನಿಷ್ಕರುಣಿಗಳಾಗುವ ಸಂತೋಷಕರ ಸ್ವತಂತ್ರವು ದೊರೆತಿರುವುದೆಂದೂ ಭಾವಿಸಿದೆನು. ಎಡೆಬಿಡದೆ ಮೋಟಾರು 'ಹೋರ್ನ್' ಮಾಡಿ ಹೇಗೂ ನಮ್ಮ ಕಾರು ಉದ್ರೇಕಿತ ಜನತೆಯ ಮಧ್ಯಕ್ಕೆ ಮುಟ್ಟಿದಾಗ, ಸೆಟ್ಟುತಿನ್ನುತ್ತಿದ್ದವನು ನಮ್ಮ ಹಳ್ಳಿಯ ಮುನಿಸಿಪಲ್ ತೋಟಿ ದೂಮನೆಂದು ತಿಳಿದುಬಂತು. ದೂಮನು ಆಗತಾನೇ ತನ್ನ ಸ್ನಾನಮುಗಿಸಿ, ಬಲದ ಕೈಯಲ್ಲೊಂದು ತಂಬಿಗೆ ಶುದ್ಧ ನೀರನ್ನೊಯ್ಯುತ್ತಿದ್ದನು. ಅವನೂ ಅಂದಿನ ಉತ್ಸವಕ್ಕೆ ಹೋಗಬೇಕೆಂಬ ಆತುರದಿಂದ ಎಡದ ಕೈಯಲ್ಲಿ ತನ್ನ ಮೊಮ್ಮಗನ ಕೈಹಿಡಿದುಕೊಂಡು ಅವಸರದಿಂದ ಬರುತ್ತಿದ್ದಾಗ, ಈ ಕ್ರೋಧೋನ್ಮತ್ತ ಪಂಗಡದ ಬ್ರಾಹ್ಮಣನೊಬ್ಬನನ್ನು ಹಾದುಹೋಗಿರಬೇಕು. ವಿಷ್ಣುಮೂರ್ತಿಯ ದರ್ಶನಕ್ಕಾಗಿ ಸರ್ವಾಂಗ ಶುದ್ಧನಾಗಿ ಹೋಗುತ್ತಿದ್ದ ಈ ಬ್ರಾಹ್ಮಣನನ್ನು ದೂಮನ ಸಾಮೀಪ್ಯವೇ ಮೈಲಿಗೆ ಮಾಡಿ ಆ ಮೂರ್ತಿ ದರ್ಶನಕ್ಕೆ ಅನರ್ಹನನ್ನಾಗಿ ಮಾಡಿರಬೇಕು.

ದೂಮನು ತೋಟಿಯಾದರೂ ಅನ್ಯಾಯಕ್ಕೆ ಬಗ್ಗದವನಾಗಿದ್ದನು. ನರಸಿಂಹನ ಪಕ್ಷೀಯರ ಅಸ್ಪೃಶ್ಯತೆಯ ನಿವಾರಣೆಯ ಕುರಿತು ಭಾಷಣಗಳನ್ನೂ ಅವನು ಕೇಳಿದ್ದನು. ಒಮ್ಮೆ ದೇಶಭಕ್ತ ಶ್ರೀನಿವಾಸ ರಾಯರು ಇವನಿಗೆ ಧರ್ಮಾರ್ಥ ಖದ್ದರ್ ವಸ್ತ್ರಕೊಟ್ಟು ಮಹಾತ್ಮಗಾಂಧಿಯವರ ಕುರಿತು ಎಲ್ಲಾ ವಿಚಾರವನ್ನು ತಿಳಿಸಿದ್ದರು. ಮೇಲೆ ದೂಮನು ಖದ್ದರ್ ವಸ್ತ್ರವನ್ನೇ ಉಟ್ಟು 'ಗಾಂಧಿ ವಸ್ತ್ರ ಗಾಂಧಿ ವಸ್ತ್ರ' ಎಂದು ಹೆಗ್ಗಳಿಕೆಪಡುತ್ತಿದ್ದನು. ಕುಡಿಯುವುದನ್ನು ಬಿಟ್ಟದ್ದನು. ನರಸಿಂಹನಿಗೆ ಇವನ ಪರಿಚಯವು ಚೆನ್ನಾಗಿದ್ದಿತು. ಇವನು ಬ್ರಾಹ್ಮಣರೊಡನೆ ಮೊದಲು ಸ್ವಲ್ಪ ಚರ್ಚಿಸಿರಬೇಕು.

ಸಂಗತಿ ಏನೇ ಇರಲಿ, ನಾನು ನೋಡುವಾಗ ವಿಷ್ಣುಪೂಜೆಗಾಗಿ ಹೋಗಿದ್ದ ಬ್ರಾಹ್ಮಣರು ರುದ್ರಾವತಾರತಳೆದಿದ್ದರು. ದೂಮನ ಚಿಕ್ಕ ಮೊಮ್ಮಗನು, ತನ್ನ ಅಜ್ಜನನ್ನು ಹೊಡೆಯಬೇಡಿರೆಂದು ಕರುಣಾಜನಕವಾಗಿ ಎಲ್ಲರೊಡನೆಯೂ ಅಂಗಲಾಚಿ ಬೇಡಿಕೊಳ್ಳುತ್ತಿದ್ದನು. ಅನಿಚ್ಛಾ

ಪೂರ್ವಕವಾಗಿ ಮಾಡಿದ ಅಪರಾಧವನ್ನು ಕ್ಷಮಿಸಬೇಕೆಂದು ದೂಮನೂ ಕೈಮುಗಿದು ಕ್ಷಮೆಕೇಳುತ್ತಿದ್ದನು. ಅವನ ಬೆದರಿ ಬೆಪ್ಪಾದ ಕಣ್ಣುಗಳಿಂದ ಕಣ್ಣೀರುಧಾರೆಯು ಸುರಿಯುತ್ತಿತ್ತು. ಅವನ ತಲೆ ಮತ್ತು ಮೈಯಲ್ಲೆಲ್ಲಾ ರಕ್ತವು ಒಸರುತ್ತಿದ್ದಿತು. ಆದರೆ ಬ್ರಾಹ್ಮಣರ ಗಲಭೆಯು ಇನ್ನೂ ಹೆಚ್ಚುತ್ತಿತ್ತು. ನರಸಿಂಹನು ಇದನ್ನು ನೋಡಿಯೂ ನೋಡದವನಂತಿದ್ದನು. ಆದರೆ ಈ ದೃಶ್ಯವು ನನಗೆ ಅಸಹನೀಯವಾಯಿತು. ತೋಟಿಯನ್ನು ಕಾರಿನೊಳಗೆ ಹಾಕಿ, ನಾನು ಈ ಶ್ರದ್ಧಾಳು ಬ್ರಾಹ್ಮಣರ ಪಂಥಕ್ಕೆ ಸೇರದವನೆಂದು ತೋರಿಸಿಬಿಡಬೇಕೆಂದು ನಿರ್ಧರಿಸಿದೆನು.

ನನ್ನ ತಳಮಳವನ್ನು ನೋಡಿ ನರಸಿಂಹನು ಅಂತರಂಗವನ್ನು ಅರಿತುಕೊಂಡನು. ನಾನು ಕೆಳಗಿಳಿಯುವಷ್ಟರಲ್ಲಿ ಅವನು ನನ್ನ ತೋಳನ್ನು ಬಲವಾಗಿ ಹಿಡಿದು "ನೀನೇನು ಮಾಡ ಹೊರಟಿರುವಿ' ದೂಮನೊಬ್ಬ ತೋಟಿಯೆಂದು ನಿನಗೆ ಗೊತ್ತಿಲ್ಲವೇ?" ಎಂದು ಪಿಸುಗುಟ್ಟಿದನು.

"ದೂಮನು ತೋಟಿಯೆಂದು ಮಾತ್ರವಲ್ಲ ನಿನ್ನ ಪರಿಚಿತನೆಂದೂ ಗೊತ್ತಿದೆ, ತೋಟಿಯಾದರೇನು? ಈ ಜನರಿಗೆ ಅವನನ್ನು ಹೀಗೆ ಪಶು ಸಮಾನವಾಗಿ ಹೊಡೆಯಲು ಹಕ್ಕೆಲ್ಲಿಂದ?"

"ಅದು ದೂಮನ ತಪ್ಪು. ರಸ್ತೆಯ ಮಧ್ಯಭಾಗವನ್ನು ಬಿಟ್ಟು, ಒಂದು ಬದಿಯಿಂದ ಹೋದರೆ ಅವನಿಗೇನು ಮರ್ಯಾದೆಗೆ ಕುಂದುಬರುತಿತ್ತು?" ಎಂದು ದೇಶಾಭಿಮಾನಿ ನರಸಿಂಹನು ಉತ್ತರಿಸಿದನು.

ನನಗಲ್ಲಿ ಹೆಚ್ಚು ಮಾತಾಡಲು ಸಹನೆಯಿರಲಿಲ್ಲ. "ನನಗದೆಲ್ಲಾ ತಿಳಿಯದು. ದೂಮನನ್ನು ನನ್ನ ಕಾರಿನಲ್ಲಿ ಹಾಕಿಕೊಳ್ಳುವುದಂತೂ ನಿಶ್ಚಯ" ಎಂದು ನಿರ್ಧಾರದಿಂದ ನುಡಿದೆನು.

"ಹಾಗಾದರೆ ನಿನ್ನ ಮೋಟರ್‌ಕಾರನ್ನು ಈಗಲೇ ನಾನು ಬಿಟ್ಟೆನು. ನಾನೊಬ್ಬ ತೋಟಿಯೊಂದಿಗೆ ಪ್ರಯಾಣ ಮಾಡಲಾರೆನು" ಎಂದು ನರಸಿಂಹನು ಕೋಪಾಕ್ರಾಂತನಾದನು.

"ನಿನಗೆ ಕಣ್ಣಿಲ್ಲವೇ? ದೂಮನು ಈಗತಾನೇ ಮಿಂದು ಬಂದವನಲ್ಲವೇ? ಅವನ ವಸ್ತ್ರವು ಬಲು ಶುದ್ಧವಾಗಿದೆ. ಅದು ಅವನನ್ನು ಹೊಡಿಯುವ ಜನರಿಗಿಂತ ನಿಜವಾಗಿಯೂ ಹೆಚ್ಚು ಶುದ್ಧವಾಗಿದೆ. ಇದಲ್ಲದೆ

ಅವನುಟ್ಟಿರುವ ವಸ್ತ್ರವು ಭಿನ್ನಭೇದಗಳನ್ನು ಮರೆಸುವ ಬಿಳಿ ಖದ್ದರಲ್ಲವೇ?" ಎಂದು ನಾನು ಮಾರ್ಮಿಕವಾಗಿ ತರ್ಕಿಸಿದೆನು.

"ಆದರೂ ಅವನೊಬ್ಬ ತೋಟಿಯು" ಎಂದು ನನಗಿಂತಲೂ ಹೆಚ್ಚು ನಿರ್ಧಾರಪೂರ್ವಕವಾಗಿ ಹೇಳಿ ನನ್ನ ಮೋಟರ್ ಕಾರಿನ ಡ್ರ್ಯಾವರನನ್ನು ನೋಡಿ, "ಗೋವಿಂದ, ಕಾರು ಮುಂದೆ ನಡಿಸು" ಎಂದು ನರಸಿಂಹನು ಆಜ್ಞಾಪಿಸಿದನು. ಕಾರಿನ ಯಜಮಾನನಾದ ನಾನು ಕೂಡದೆಂದು ಹೇಳಿ ಕಾರಿನಿಂದ ಕೆಳಗೆ ಧುಮುಕಿದೆನು. ದೂಮುನನ್ನೂ ಅವನ ಮೊಮ್ಮಗನನ್ನೂ ಕಾರಿನಲ್ಲಿ ಹಾಕಿದೆನು. ಆ ಮೊದಲೇ ನರಸಿಂಹನು ಕಾರಿನಿಂದ ಇಳಿದಿದ್ದನು. ನನ್ನ ಕೃತ್ಯಕ್ಕಾಗಿ "ಧರ್ಮಭ್ರಷ್ಟ! ಅನಾಚಾರಿ!" ಎಂದೆಲ್ಲರೂ ಉದ್ಘೋಷಿಸಿದರು. ನಾನು ಯಾವುದನ್ನೂ ಗಣಿಸದೆ ಡ್ರ್ಯಾವರನೊಡನೆ ಕಾರು ನಡಿಸುವಂತೆ ಹೇಳಿ ದೂಮುನನ್ನು ಆಸ್ಪತ್ರೆಗೊಯ್ದೆನು.

ಆ ಮೇಲೆ ನರಸಿಂಹನು ದೇಶಭಕ್ತ ಶ್ರೀನಿವಾಸರಾಯರ ಮನೆಯ 'ಟೀಪಾರ್ಟಿ'ಗೆ ತೆರಳಿ ಅಲ್ಲಿ ಅಸ್ಪೃಶ್ಯತಾ ನಿವಾರಣೆಯ ಪರವಾಗಿ ಕೊಟ್ಟ ಭಾಷಣದ ಕುರಿತು ಮಂಗಳೂರಿನ 'ದೇಶಮಿತ್ರ' ಪತ್ರಿಕೆಯಲ್ಲಿ ಹೀಗೆ ಪ್ರಕಟವಾಗಿತ್ತು.

"ದೇಶಭಕ್ತ ಶ್ರೀನಿವಾಸರಾಯರ ಮನೆಯ 'ಟೀಪಾರ್ಟಿ'ಯ ವೇಳೆ ಶ್ರೀ. ನರಸಿಂಹ ಭಟ್ಟರು ಅಸ್ಪೃಶ್ಯತೆಯ ನಿವಾರಣೆಯ ಕುರಿತು ಸ್ಫೂರ್ತಿಯಿಂದ ಕೊಟ್ಟ ಭಾಷಣವು ಮನನೀಯವಾಗಿದೆ. ಇವರಂತಹ ರಾಷ್ಟ್ರಭಕ್ತರನ್ನು ಪಡೆದ ನಮ್ಮ ನಾಡು ಧನ್ಯ!" ಅಸ್ಪೃಶ್ಯತೆಯೆಂಬುದು ಹಿಂದೂ ದೇಶದ ಅತಿ ದೊಡ್ಡ ಕಳಂಕ. ರಾಷ್ಟ್ರದ ಅಭ್ಯುದಯವು ಅಸ್ಪೃಶ್ಯತಾ ನಿವಾರಣೆಯನ್ನು ಅವಲಂಬಿಸಿರುತ್ತದೆ. ಕೇವಲ ಜನ್ಮದ ನಿಮಿತ್ತ ಹರಿಜನರು ಜೀವನ್ಮೃತರಾಗಿರುವುದು ಅದೆಷ್ಟು ಶೋಚನೀಯ! ಎಲ್ಲರೂ ಹರಿಜನೋದ್ಧಾರದ ಕಾರ್ಯವನ್ನು ಕೈಗೊಳ್ಳಬೇಕು. ಪಂಚಮರ ಶರೀರವೂ ನಮ್ಮ ದೇಹನಿರ್ಮಾಣ ಸಾಮಗ್ರಿಗಳಿಂದಲೇ ರಚಿಸಲ್ಪಟ್ಟಿದೆ. ಅವರ ಮತ್ತು ನಮ್ಮ ಆತ್ಮವು ಒಂದೇ ಚೈತನ್ಯದ ಅಂಶವು ಅಂದ ಮೇಲೆ ನಾವವರನ್ನು ದೂರಕ್ಕೋಡಿಸುವುದೇಕೆ? ಅಸ್ಪೃಶ್ಯತೆ ಎಂಬ ರಾಕ್ಷಸನನ್ನಲ್ಲವೇ ಹೊಡೆದೋಡಿಸಬೇಕು?"....ಎಂಬುದೇ ಅವರ ಭಾಷಣದ ಸಾರ

—ನವಯುಗ

# ೧. ಸುಧಾಂಬುಧಿ.

ಚೋಳಚಕ್ರಾಧೀಶ್ವರ ನೆಡುಮುಡಿಕಿಲ್ಲಿಯ ಯಶೋಪುಂಜದಿಂದ
ತೇಜೋಮಯವಾಗಿದ್ದ ಕಾವೇರಿ ಪಟ್ಟಣದ ಅದೊಂದು ಬೀದಿ.
ಆ ಬೀದಿಯಲ್ಲೊಂದು ಕುಟೀರ. ಆ ಕುಟೀರದ
ಜ್ಯೋತಿಯೇ ಸುಧಾಂಬುಧಿ.

**ಸು**ಧಾಂಬುಧಿಯ ತಾಯಿಯು ಎಂದೋ ತೀರಿ ಹೋಗಿದ್ದಳು. ತಂದೆಯಾದ ಪ್ರೇಮನಿಧಿಯೇ ಅವಳನ್ನು ಪಾಲಿಸುತ್ತಾ ಬರುತ್ತಿದ್ದನು. ತನ್ನ ಮಗಳಿಗೆ ಯೋಗ್ಯವಾದ ವಿದ್ಯೆಯನ್ನು ಕಲಿಸಿ ಅವಳು ಆ ಕಾಲದ ಸ್ತ್ರೀಯರಲ್ಲೆಲ್ಲಾ ಅಗ್ರಗಣ್ಯೆಯೆಂದೆನಿಸುವಂತೆ ಬ್ರಾಹ್ಮಣೋತ್ತಮನಾದ ಪ್ರೇಮ ನಿಧಿಯು ಮಾಡಿದ್ದನು. ಸುಧಾಂಬುಧಿಯು ರೂಪದಲ್ಲಿಯೂ ತನ್ನ ಓರಗೆಯ ಗೆಳತಿಯರನ್ನು ಮೀರಿದ್ದಳು. ಅಲ್ಲದೆ ವಿನಯಾದಿ ಸದ್ಗುಣ ಭರಿತೆಯಾಗಿದ್ದುದರಿಂದ ಕಾವೇರಿ ಪಟ್ಟಣವೇ ಅವಳನ್ನು ಪೂಜಿಸುತ್ತಿತ್ತು. ಪ್ರೇಮನಿಧಿಯಾದರೋ ಅವಳನ್ನು ತನ್ನ ಕಣ್ಣುಗಳಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದನು.

ಸುಧಾಂಬುಧಿಯು ಸಂಪಿಗೆಯ ಮೊಗ್ಗೆಯಂತೆ ಬಿರಿಯುತ್ತಾ ಬಂದಳು. ಪಟ್ಟಣದ ಯುವಕರ ಕಣ್ಣುಗಳೆಲ್ಲವೂ ಅವಳನ್ನು ಹಿಂಬಾಲಿಸಿದವು. ಅವರ ಹೃದಯಗಳೆಲ್ಲವೂ ಅವಳನ್ನೆಳಸಿದವು. ಆದರೆ ಬಾಲಾಮಣಿಯ ಮನಸ್ಸು ಮಾತ್ರ ಅವರೆಡೆ ಹರಿಯಲಿಲ್ಲ. ಅನೇಕರು ಭ್ರಾಂತರಾದರು; ಇನ್ನನೇಕರು ಕ್ರೋಧಗೊಂಡರು. ಬಾಲೆಯು ಮಾತ್ರ ಹೆದರಲಿಲ್ಲ.

ಸಾಯಂಕಾಲ ಯಾವಾಗಲೂ ಚಂಪಾಂಬುಧಿಯ ದೇವಸ್ಥಾನವನ್ನು ದರ್ಶನಮಾಡಿ ಚಂಪಾಂಬುಧಿ ದೇವಿಯ ಪ್ರಸಾದವನ್ನು ಪಡೆಯುವುದು ಸುಧಾಂಬುಧಿಯ ನಿತ್ಯಕರ್ಮವಾಗಿತ್ತು. ಒಂದು ದಿನ ಸಾಯಂಕಾಲ ಎಂದಿನಂತೆ ಅವಳು ದೇವಿಯ ದರ್ಶನಕ್ಕೆ ಹೋದಳು. ಬ್ರಾಹ್ಮಣೋತ್ತಮನೂ ವೇದಶಾಸ್ತ್ರಪಾರಂಗತನೂ ಎಂದೆನಿಸಿದ್ದ ಅರ್ಚಕನೊಬ್ಬನು ದೇವಿಯ ಬಳಿಯಲ್ಲಿ ನಿಂತಿದ್ದನು. ಅವನ ಕೈಬೆರಳಲ್ಲಿ ದರ್ಭೆ; ಭುಜದ ಮೇಲೆ

ಯಜ್ಞೋಪವೀತ; ಸೊಂಟದ ಕೆಳಗೆ ಪೀತಾಂಬರ. ಸುಧಾಂಬುಧಿಯು ಆವನ ಬಳಿ ಕೈಯೊಡ್ಡಿ ನಿಂತಳು. ಅರ್ಚಕನು ಕೆಲವು ಪುಷ್ಪಗಳನ್ನೂ ಗಂಧವನ್ನೂ ತೆಗೆದು ಸುಧಾಂಬುಧಿಯ ಕೈಯೊಳಿಟ್ಟು ಹಾಗೆಯೇ ಪ್ರಸನ್ನ ದೃಷ್ಟಿಯಿಂದ ಅವಳನ್ನು ನೋಡಿ ಅಂಗೈಯ ಚಿವುಟಿತೆಗೆದನು. ಯುವತಿಗೆ ಅರ್ಥವಾಗಲೇ ಇಲ್ಲ. ಕೂಡಲೇ ಅವಳು ತನ್ನ ಕೈಗಳನ್ನು ಸೆಳೆದುಕೊಂಡು ಪ್ರಸಾದವನ್ನೆತ್ತಿಕೊಂಡು ದೇವಿಗೆ ನಮಸ್ಕರಿಸಿ ಮನೆಗೆ ಹೊರಡಲುದ್ಯುಕ್ತ ಳಾದಳು. ಅರ್ಚಕನೋ ತನ್ನ ಸಂಕೇತ ತಿಳಿಯದಾದುದನ್ನು ನೋಡಿ ಅವಳನ್ನು ಹಿಂಬಾಲಿಸಿದನು. ಮುಂದೆ ದೇವಸ್ಥಾನದ ದ್ವಾರದ ಬಳಿ ಬಲು ಕತ್ತಲಿತ್ತು. ಅದೇ ತಕ್ಕ ಸ್ಥಳವೆಂದು ನಿಶ್ಚಯಿಸಿ ಅರ್ಚಕನು ದೇವಸ್ಥಾನದ ಬಾಗಿಲನ್ನು ಸೇರಿ ಆಗ ಹೊರಗೆ ಕಾಲಿಡುತ್ತಿದ್ದ ಸುಧಾಂಬುಧಿಯ ಸೆರಗನ್ನು ಹಿಡಿದೆಳೆದನು. ಯುವತಿಯು ಹಿಂದಿರುಗಿ ನೋಡಿ-'ಅರ್ಚಕನೇ ಇದೇನು ವಿಪರೀತಬುದ್ಧಿ!' ಎಂದಳು. ಅರ್ಚಕನು ನಸುನಗುತ್ತ-'ಸುಧಾಂಬುಧಿ ನಿನ್ನ ಪ್ರೇಮದ ಸುಧೆಯನ್ನುಣ್ಣಲು ಬಯಸಿದ್ದೇನೆ!' ಎಂದನು. ಕೂಡಲೇ ಸುಧಾಂಬುಧಿಯು-'ನಿನ್ನ ಹಣೆಯಲ್ಲದು ಬರೆಯಲಿಲ್ಲ! ಛೀ! ಯತೀಶ್ವರ ನಾದರೂ, ಇಂಥಾ ಆಲೋಚನೆಯೇ! ನಿನಗೆ ಧಿಕ್ಕಾರ!' ಎಂದೆಂದು ರೋಷಗೊಂಡ ಹಾವಿನಂತೆ ದೇವಸ್ಥಾನವನ್ನು ಬಿಟ್ಟು ನಡೆದಳು.

ದಿನಗಳು ಕಳೆದವು. ಒಂದುದಿನ ಸುಧಾಂಬುಧಿಯು ಮಧ್ಯಾಹ್ನದ ಸೆಕೆಯನ್ನು ನಿವಾರಿಸಿಕೊಳ್ಳುವುದಕ್ಕಾಗಿ ತನ್ನ ಕುಟೀರದ ಜಗುಲಿಯ ಮೇಲೆ ಕುಳಿತು ಏನನ್ನೋ ಓದುತ್ತಿದ್ದಳು. ಪ್ರೇಮನಿಧಿಯು ಚಂಪಾಂಬು ಧಿಯ ಸೇವೆಗೆ ಹೋಗಿದ್ದನು. ಆಗ ಓರ್ವ ತರುಣನು ಅವಳ ಮುಂದೆ ನಿಂತನು. ಅವನ ಕೈಯಲ್ಲೊಂದು ವೀಣೆ, ಅವನ ಹೆಗಲಲ್ಲೊಂದು ಜೋಳಿಗೆ. ತರುಣನ ರೂಪುರೇಖೆಗಳೋ ಕಾವೇರಿಪಟ್ಟಣದ ಅತಿ ಸುಂದರ ಪುರುಷನನ್ನೇ ಧಿಕ್ಕರಿಸುತ್ತಿದ್ದವು. ಅವನ ವಿಲಾಸವು ಗಂಧರ್ವರ ಠೀವಿ ಯನ್ನು ವಿಸ್ತರಿಸ್ತಿತ್ತು. ತರುಣನು ಸುಧಾಂಬುಧಿಯ ಮುಂದೆ ನಿಂತು, ವೀಣೆಯನ್ನು ಬಾರಿಸತೊಡಗಿದನು. ವೀಣಾನಾದದೊಡನೆ ಅವನಸ್ವರವೂ ಬೆರೆತು ಆ ಪ್ರದೇಶವೇ ಗಂಧರ್ವ ಲೋಕವೆಂದೆನ್ನುವಂತೆ ಮಾಡಿತು. ಯುವಕನು ಹಾಡುತ್ತಾ ನಿಂತನು. ಸುಧಾಂಬುಧಿಯು ಕೇಳುತ್ತಾ ಕುಳಿತಳು,

ಏನಾ ವೀಣಾನಾದ! ಏನಾ ಹಾಡಿನ ಇಂಪು! ವೀಣಾನಾದವು ಹಾಡಿನ ಇಂಪಿನೊಡನೆಕಲೆತು ಸುಧಾಂಬುಧಿಯ ಹೃದಯಂತಂತಿಯನ್ನುಕಂಪಿಸಿತು. ಆಗ ಅವಳ ಕಣ್ಣುಗಳು ಅವನ ಕಣ್ಣುಗಳನ್ನು ಸಂಧಿಸಿದವು. ಅವಳ ಹೃದಯವು ತಕ್ಷಣವೇ ಅವನಲ್ಲಿ ಲೀನವಾಯಿತು. ಅವನ ಹಾಡು ಮುಗಿಯಿತು.

ಯುವಕನು ಹೊರಡಲುದ್ಯುಕ್ತನಾದನು. ಅವನ ಕಾಲುಗಳು ಮಾತ್ರ ಮುಂದೆಗೆಯವು. ಆದರೂ ಮುಂದೆ ಹೆಜ್ಜೆ ಇಟ್ಟನು. ಸುಧಾಂಬುಧಿಯು ಲಜ್ಜಾಯುಕ್ತವಾದ ಮುಖವನ್ನು ತಗ್ಗಿಸಿ,– ಹೋಗಬೇಕೆ?" ಎಂದಳು. ಯುವಕನು ಒಡನೆ 'ಅಹುದು' ಎಂದನು.

"ಇಲ್ಲಿರಬಾರದೆ? ನಿನ್ನ ಹಾಡನ್ನು ಕೇಳಿದರೆ ನನಗತ್ಯಾನಂದವಾಗುತ್ತಿದೆ" ಎಂದು ಸುಧಾಂಬುಧಿಯು ನುಡಿದಳು. ಆಗಲಾ ಯುವಕನು 'ನಸುನಕ್ಕು–ನನ್ನ ವೃತ್ತಿಯೇ ಹಾಡುಗಾರಿಕೆ. ಈ ಹಾಡುಗಾರಿಕೆಯಿಂದಲೇ ನನ್ನ ಜೀವನ. ನಾನಿಲ್ಲಿದ್ದರೆ ಹೇಗೆ ಜೀವನ ಸಾಗಿಸಲಿ? ಎಂದು ಆ ಯುವಕನು ಹೇಳಿದನು.

"ಯಾಕೆ? ಇಲ್ಲಿಯೇ ಇರಬಹುದಲ್ಲಾ! ನನ್ನ ತಂದೆಯು ನಮ್ಮಿರ್ವರಿಗಾಗಿ ಸಾಕಷ್ಟು ಅನ್ನ ಬಟ್ಟೆಯನ್ನು ಒದಗಿಸುವನು" ಎಂದು ಪುನಃ ಸುಧಾಂಬುಧಿಯು ಹೇಳಿದಳು. ಯುವಕನು–'ರಮಣಿಯೇ. ನನ್ನ ಬೆವರಿನಿಂದಲೇ ನಾನು ಜೀವನವನ್ನು ನಡೆಸಬೇಕಾಗಿದೆ' ಎಂದಂದು ಮುಂದೆ ಕಾಲಿಟ್ಟನು. ಆದರೆ ಸುಧಾಂಬುಧಿಯ ಹೃದಯವೀಣಾನಾದವು ಸ್ಪಂದನವಾಗುತ್ತಲಿತ್ತು. ಅವಳ ತಂದೆಯ ನೆನಪೂ ಅಳಿದುಹೋಯಿತು. ಆ ಯುವಕನು ಮಾತ್ರ ಅವಳ ಕಣ್ಣಮುಂದೆ ತೋರುತ್ತಿದ್ದನು. ಹಿಂದು ಮುಂದು ನೋಡದೆ–'ಯುವಕನೇ ನಿನ್ನ ವೀಣಾನಾದವನ್ನು ಕೇಳದಿದ್ದರೆ ನನಗೀ ಜಗತ್ತೇ ಕತ್ತಲು' ಎಂದು ನುಡಿದು ಸುಧಾಂಬುಧಿಯು ಗಾಯಕನನ್ನು ಹಿಂಬಾಲಿಸಿದಳು.

ಪ್ರೇಮನಿಧಿಯು ಮಧ್ಯಾಹ್ನದ ಪೂಜಾವಿಧಿಗಳನ್ನು ತೀರಿಸಿ ಮನೆಗೆ ಬಂದನು. ಆದರೆ ಸುಧಾಂಬುಧಿಯು ಇರಲಿಲ್ಲ. ಮನೆಯನ್ನೆಲ್ಲಾ ಹುಡುಕಿದನು. ಹತ್ತೆಂಟುಸಾರಿ ಕೂಗಿದನು. ವಿಧವಿಧವಾಗಿ ಅತ್ತನು. ಎಲ್ಲಿಯೂ ಅವಳ ಸೊಲ್ಲೇ ಇಲ್ಲ. ಅವನಿಗೊಡನೆ ತನ್ನ ಪ್ರಾಣವೇ ಹಾರಿಹೋದಂತಾ

ಯಿತು. ತನ್ನನ್ನು ಪಿತೃದೇವನೆಂದು ಪೂಜಿಸುತ್ತಿದ್ದ ಯುವತಿ–ತನ್ನ ಕಣ್ಣು ಗಳಂತಿದ್ದ ಪುತ್ರಿ–ಮನೆಯಲ್ಲಿಲ್ಲದಿದ್ದುದನ್ನು ನೋಡಿ ವಿಸ್ಮಯಗೊಂಡನು. ಅಷ್ಟರಲ್ಲಿ ಚಂಪಾಂಬುಧಿಯ ಅರ್ಚಕನು ಕೊಂಕಿನಿಂದ ನಗುತ್ತ ಪ್ರೇಮ ನಿಧಿಯ ಮುಂಗಡೆನಿಂತು,–"ಸುಧಾಂಬುಧಿ ಗಾಯಕನ ಬೆನ್ನುಹಿಡಿದಿರು ವಳು" ಎಂದು ನುಡಿದನು. ಒಡನೆ ಪ್ರೇಮನಿಧಿಯ ತಲೆಯ ಮೇಲೆ ಸಿಡಿಲುಹೊಡೆದಂತಾಯಿತು. ಆದರೂ ಸ್ವಲ್ಪ ಸಮಾಧಾನಿಸಿಕೊಂಡನು. ಕೋಪದ ಬದಲು ಅವನ ಮನಸ್ಸನ್ನು ವ್ಯಸನವೇ ಆವರಿಸಿತು. ಏಕಮಾತ್ರ ಪುತ್ರಿ ತಾಯನ್ನು ಕಳೆದುಕೊಂಡು ಕಷ್ಟಗಳನ್ನನುಭವಿಸಿದವಳು, ಎಲ್ಲಿ ಯಾವ ರೀತಿಯಲ್ಲಿ ಕಷ್ಟವನ್ನನುಭವಿಸುವಳೋ ಎಂದು ಅವನ ಮನಸ್ಸು ಮರುಗಲಾರಂಭಿಸಿತು. ಪ್ರೀತಿಯೇ ಅವನಲ್ಲಂಕುರಿಸಿ, 'ಮಗಳಿಲ್ಲದ ಮನೆಯೇ ಶೂನ್ಯ'ವೆಂದಂದುಕೊಂಡು, ಸುಧಾಂಬುಧಿಯನ್ನರಸುತ್ತ ಹೊರಟನು.

ಂಂ ಂಂ ಂಂ

ಮಧ್ಯಾಹ್ನದ ಉರಿಬಿಸಿಲು ಸಿರಿದೇವಿಯ ಕಾಂತಿಯು ಮಧ್ಯಸ್ಥಳ ದಲ್ಲಿ ಮೆರೆಯುವ ವಜ್ರದಂತೆ ಕಾಂಚೀನಗರವು ಕಂಗೊಳಿಸುತ್ತಿತ್ತು. ಆ ಕಾಂಚೀನಗರದ ಪುರೋಭಾಗದಲ್ಲೊಂದು ಛತ್ರ. ಬ್ರಾಹ್ಮಣ ಪುಂಗವ ನೊಬ್ಬನು ಬಲು ದೂರದಾರಿ ನಡೆದ ಆಯಾಸದಿಂದ ಬಳಲಿ ಆ ಛತ್ರದ ಮುಂದೆ ನಿಂತನು. ಅವನ ಕಣ್ಣುಗಳು ಯಾರನ್ನೋ ಅರಸುತ್ತಿದ್ದವು. ಅವನ ಹೃದಯವು ಕಡುವ್ಯಸನದಿಂದ ತುಂಬಿತ್ತೆಂದು ಅವನ ಮುಖವು ತೋರಿಸುತ್ತಿತ್ತು. ಬ್ರಾಹ್ಮಣನು ಛತ್ರದ ಮುಂಗಡೆ ನಿಂತಕೂಡಲೇ ಓರ್ವ ಯುವತಿಯು ಒಳಗಿನಿಂದ ಓಡಿಬಂದು ಅವನನ್ನು ತಬ್ಬಿಕೊಂಡಳು. ಅವಳ ಮುಖವು ಧೂಳೀಮಯವಾಗಿದ್ದಿತು. ಕಣ್ಣುಗಳು ಅಶ್ರುಬಿಂದುಗಳಿಂದ ತೋಯ್ದು ಮನೋವೇದನೆಯನ್ನು ಸೂಚಿಸುತ್ತಿದ್ದುವು. ಬ್ರಾಹ್ಮಣನು ಸಂಘಟನೆಯನ್ನು ನೋಡಿ ಅವಾಕ್ಕಾದನು. ಅವನಿಗೇನು ಮಾಡಬೇಕೋ ತಿಳಿಯಲಿಲ್ಲ. ಅಷ್ಟರಲ್ಲಿ ಆ ಯುವತಿಯು–"ಅಪ್ಪಾ ಜಾರಿದೆ, ನನ್ನನ್ನು ಕ್ಷಮಿಸುವದಿಲ್ಲವೇ?" ಎಂದು ದೀನವಾಣಿಯಿಂದ ನುಡಿದಳು. ಬ್ರಾಹ್ಮ ಣನು ಯುವತಿಯ ಮುಖವನ್ನು ನೋಡಿ ಆನಂದದಿಂದ ತುಂಬಿ ಆ ಬಾಲೆಯ ಗಲ್ಲವನ್ನು ಸವರಿ–"ಮಗೂ, ಕ್ಷಮಿಸುವುದಕ್ಕೇನಿದೆ? ನಿನ್ನನ್ನು

ಕಂಡದ್ದೇ ಮಹಾಪುಣ್ಯವನ್ನು ಸಂಪಾದಿಸಿದಂತೆ ನನಗೆ ತೋರುತ್ತಿದೆ" ಎಂದನು. ಪ್ರೀತಿಯಲ್ಲಿ ನದಿಯಾಗಿ ಹರಿಯಿತು.

ಪ್ರೇಮನಿಧಿಯು ಮಗಳೊಡನೆ ಮನೆಯನ್ನು ಸೇರಿದನು. ಆಗಲೇ ಚಂದ್ರನುದಿಸಿದ್ದನು. ಪ್ರಯಾಣದ ಆಯಾಸದಿಂದ ಮನೆಯನ್ನು ತಲಪಿದ ಕೂಡಲೆ ಅವರಿಬ್ಬರಿಗೂ ನಿದ್ರೆಬಂದಿತು. ಮರುದಿನ ಪ್ರಾತಃಕಾಲ ಸುಧಾಂಬುಧಿಯು ಎದ್ದು ಬೀದಿಯ ಬಾಗಿಲನ್ನು ತೆರೆದಳು. ಒಂದು ಪ್ರಚಂಡವಾದ ಬ್ರಾಹ್ಮಣ ಸಭೆಯೇ ಅವಳ ಮನೆಯ ಮುಂದೆ ನೆರೆದಿತ್ತು. ಚಂಪಾಂಬುಧಿಯ ಅರ್ಚಕನು ಎಲ್ಲರಿಗೂ ಮುಂದಾಗಿ ನಿಂತು ಏನನ್ನೋ ಹೇಳಿಕೊಳ್ಳುತ್ತಿದ್ದನು. ಆ ಬ್ರಾಹ್ಮಣ ಸಮೂಹವು ಸುಧಾಂಬುಧಿಯನ್ನು ಬಿರುಗಣ್ಣಿನಿಂದ ನೋಡಿತು. ಬಾಲೆಯು ಭಯಭರಿತಳಾದಳು. ಅವಳು ಒಡನೆ ಓಡಿಹೋಗಿ ಪ್ರೇಮನಿಧಿಯನ್ನೆಚ್ಚರಿಸಿದಳು. ಪ್ರೇಮನಿಧಿಯು ಅನಾಹುತವೇನೆಂದು ತಿಳಿಯಲು ಬೇಗನೆದ್ದು ಹೊರಗೆ ಬಂದನು. ಆಗ ಚಂಪಾಂಬುಧಿಯ ಅರ್ಚಕನು ಓರ್ವ ವೈದಿಕನೊಡನೆ ಪ್ರೇಮನಿಧಿಯ ಮುಂದೆ ನಿಂತು "ಲೋ ಬ್ರಾಹ್ಮಣಾ, ನಿನ್ನ ಜನ್ಮಕ್ಕೆ ಧಿಕ್ಕಾರವಿರಲಿ! ಓಡಿಹೋದ ಹೆಣ್ಣನ್ನು ಮನೆಯಲ್ಲಿರಿಸಿಕೊಳ್ಳುವುದೇ? ನಿನ್ನಂಥ ಅಧಮ ರಿಂದ ನಾವು ಕುಲಭ್ರಷ್ಟರಾಗುವುದೇ ಖಂಡಿತ. ಅವಳನ್ನು ಮನೆಯಿಂದ ಹೊರಡಿಸುವೆಯಾ? ಇಲ್ಲವೇ ಬಹಿಷ್ಕಾರಕ್ಕೆ ಸಿದ್ಧನಾಗಿರುವೆಯಾ?" ಎಂದನು. ಪ್ರೇಮನಿಧಿಗೆ ರೋಷವು ಇಮ್ಮಡಿಯಾಯಿತು. "ನನ್ನ ಪ್ರೇಮದ ಪುತ್ರಿಯಿಂದ ದೂರನಾಗುವುದೇ? ನನ್ನ ಪ್ರೀತಿಯ ಮಗಳನ್ನು ನಿರ್ಗತಿಕ ಳಂತೆ ಬೀದಿಗಟ್ಟುವುದೇ? ಅದೆಂದಿಗೂ ಸಾಗದು. ಹಾಕಿರಿ ನಿಮ್ಮ ಬಹಿ ಷ್ಕಾರ! ನನ್ನ ಪುತ್ರಿಯನ್ನು ಅಗಲಿರಲಾರೆನು" ಎಂದುಬಿಟ್ಟನು. ಹಾರವ ವೃಂದವು ಒಡನೆ ದೊಡ್ಡ ಕೋಲಾಹಲವನ್ನೆಬ್ಬಿಸಿತು. "ಪ್ರೇಮನಿಧಿಗೆ ಬಹಿಷ್ಕಾರ! ಬಹಿಷ್ಕಾರ! ಬಹಿಷ್ಕಾರ! ಬ್ರಾಹ್ಮಣಾಧಮನಿಗೆ ಬಹಿಷ್ಕಾರ!" ಎಂದು ಕೂಗಿಕೊಂಡಿತು.

'ಬಹಿಷ್ಕಾರ! ಪ್ರೇಮನಿಧಿಗೆ ಬಹಿಷ್ಕಾರ!' ಎಂಬ ಶಬ್ದಗಳು ಊರ ಲ್ಲೆಲ್ಲಾ ಹರಡಿದುವು. ಸಮಾಜವೇ ಪ್ರೇಮನಿಧಿಯಿಂದ ದೂರವಾಯಿತು. ಸಾಲದುದಕ್ಕೆ ಆಗಿನ ಕಾಲದ ಸಂಪ್ರದಾಯದಂತೆ ಬಹಿಷ್ಕಾರ ಹೊತ್ತು

ಕೊಂಡವನ ಸೊತ್ತೆಲ್ಲವೂ ಸಮಾಜಕ್ಕೆ ಸೇರಬೇಕಾಗಿತ್ತು. ಬಹಿಷ್ಕೃತರ ಪಟ್ಟಣದ ಹೊರಗೆ ವಾಸಮಾಡಬೇಕಾಗಿತ್ತು. ಆದರೂ ಪ್ರೇಮನಿಧಿಯು ತನ್ನ ಪುತ್ರಿಯನ್ನಗಲಲೊಪ್ಪಲಿಲ್ಲ. ಧೈರ್ಯದಿಂದ ಸುಧಾಂಬುಧಿಯೊಡನೆ ತನ್ನ ಮನೆಯನ್ನು ಬಿಟ್ಟು ಬೀದಿಗೆ ಕಾಲಿಟ್ಟನು. ಅವನ ಕೈಯಲ್ಲೊಂದು ದೊಣ್ಣೆ. ಹೆಗಲಲ್ಲೊಂದು ಜೋಳಿಗೆ. ಇನ್ನು ಭಿಕ್ಷುಕರಾಗಿ ಜೀವಿಸುವುದೇ ಉತ್ತಮವೆಂದು ಮಗಳೊಡನೆ ಮುಂದೆ ನಡೆದನು.

ಆದರೆ ಅದೃಷ್ಟವೇ! ಸುಧಾಂಬುಧಿಯೂ ಅವಳ ತಂದೆಯೂ ಬ್ರಾಹ್ಮಣಕೇರಿಯನ್ನು ದಾಟುತ್ತಿದ್ದರು. ಅಷ್ಟರಲ್ಲಿ ಒಂದು ದೊಡ್ಡ ಗೂಳಿ ಎತ್ತು ಆ ಕಡೆ ಧಾವಿಸಿ ಬಂತು. ಪ್ರೇಮನಿಧಿಯು ಮುದುಕ. ಅವನು ರಸ್ತೆಯ ಬದಿಗೆ ನಡೆಯುವುದರೊಳಗಾಗಿ ಅದು ಅವನನ್ನು ಹಾದು ನೆಲಕ್ಕೆ ಕೆಡವಿತು. ನೆಲಕ್ಕೆ ಬಿದ್ದ ರಭಸದಲ್ಲಿ ಬ್ರಾಹ್ಮಣನ ತೊಡೆಗಳ ಕೀಲೇ ಕಳಚಿ ಹೋಯಿತು. ಅವನು ನೋವಿನಿಂದ ನರಳುತ್ತಾ ಅಲ್ಲೇ ಬಿದ್ದು ಬಿಟ್ಟನು. ಹಸಿವೆಯಿಂದ ಕೃಶಳಾಗಿದ್ದ ಸುಧಾಂಬುಧಿಗೆ ತಂದೆಯನ್ನೆತ್ತಿ ಉಪಚರಿಸಲು ಶಕ್ತಿ ಇರಲಿಲ್ಲ. ಆದರೂ ಅವನ ತಲೆಯನ್ನು ತನ್ನ ತೊಡೆಯ ಮೇಲಿಟ್ಟು ಮೈಯನ್ನೆಲ್ಲಾ ನೀವಿದಳು. ಪಕ್ಕದಲ್ಲಿ ನಿಂತಿದ್ದ ಬ್ರಾಹ್ಮಣರು ಕೈಚಪ್ಪಾಳೆ ಹೊಡೆದು ನಗುತ್ತಾ "ಇಗೋ ಇದೇ ಕರ್ಮಫಲ ಸಮಾಜವನ್ನು ಧಿಕ್ಕರಿಸಿದುದಕ್ಕೆ ಪ್ರಾಯಶ್ಚಿತ್ತ"ವೆಂದಂದರು. ಆಗ ಪ್ರೇಮನಿಧಿಯು ನೋವಿನಿಂದ ನರಳುತ್ತಾ ''ದಾಹ! ದಾಹ!ವೆಂದು ಕೂಗಿಕೊಂಡನು. ಸುಧಾಂಬುಧಿಯು ಒಡನೆ ಎದ್ದು ಪಕ್ಕದ ಮನೆಗೆ ಹೋಗಿ ನೀರನ್ನು ಕೇಳಿದಳು—'ಏನು, ಬಹಿಷ್ಕೃತೆಗೆ ನೀರೇ? ಎಂದು ಒಳಗಿನಿಂದ ಉತ್ತರ ಬಂತು. ಸುಧಾಂಬುಧಿಯು "ಅಮ್ಮಾ ನಾನೂ ನಿಮ್ಮಂತೆ ಮನುಷ್ಯಳು; ನಮ್ಮನ್ನು ಮನುಷ್ಯರೆಂದಾದರೂ ಭಾವಿಸಿ ಸ್ವಲ್ಪ ನೀರು ಕೊಡಿರಿ" ಎಂದು ಕೇಳಿದಳು. ಆದರೆ ಒಳಗಿನಿಂದ ಉತ್ತರವೇ ಬರಲಿಲ್ಲ. ಸುಧಾಂಬುಧಿಗೆ ಮುಂದೆ ಏನು ಮಾಡಬೇಕೋ ತೋರಲಿಲ್ಲ. ತನ್ನ ತಂದೆಯನ್ನು ಚಿಕಿತ್ಸಾಗೃಹಕ್ಕಾದರೂ ಕರಕೊಂಡು ಹೋದರೆ ಮುಂದೆ ಕಷ್ಟವೆಲ್ಲವೂ ಕಳೆಯುವುದು ಎಂದೆಣಿಸಿ ಪಕ್ಕದ ಮನೆಯವರನ್ನು "ಅಣ್ಣಾ, ಅಪ್ಪಾ,"ಎಂದು ಸಂಬೋಧಿಸಿ ತನಗೆ ಸಹಾಯಮಾಡಬೇಕೆಂದು ಕೇಳಿದಳು

ಆದರೆ ಸಹಾಯವೆಲ್ಲಿಂದಲೂ ಬರಲಿಲ್ಲ. ಅಷ್ಟರಲ್ಲಿ ಆ ಬೀದಿಯಲ್ಲಿ 'ಅಹಿಂಸಾ ಪರಮೋ ಧರ್ಮಃ'ಎಂಬ ನುಡಿಯು ಅವಳ ಕಿವಿಗೆ ಕೇಳಬಿತ್ತು. ಸುಧಾಂಬುಧಿಯು ಹಿಂದಿರುಗಿ ನೋಡಿದಳು. ಓರ್ವ ಜೈನ ಯತಿಯು ತನ್ನ ಶಿಷ್ಯವೃಂದದೊಡನೆ ಆ ಕಡೆ ಬರುತ್ತಿದ್ದನು. ಅವನ ಕೈಯಲ್ಲಿ ದಂಡ-ಕಮಂಡಲ, ಅವನ ಮೈಯಲ್ಲಿ ಕಾಷಾಯ ವಸ್ತ್ರ; ಅವನೊ ಜೀವ ಹಿಂಸೆಯನ್ನು ತೊರೆದು, ಕ್ಷುದ್ರ ಜೀವಿಗಳಿಗೂ ನೋವಾಗದಂತೆ ಬಹು ಮೆತ್ತಗೆ ಕಾಲನ್ನಿಡುತ್ತಾ 'ಅಹಿಂಸಾ ಪರಮೋ ಧರ್ಮಃ' ಎಂಬ ವಾಕ್ಯ ನ್ನುಚ್ಚರಿಸುತ್ತಾ ನಡೆದು ಬರುತ್ತಿದ್ದನು.

ಅವನನ್ನು ಕಂಡ ಕೂಡಲೇ ಸುಧಾಂಬುಧಿಗೆ ಜೀವಬಂದಂತಾ ಯಿತು. ಒಡನೆ ಅವಳು ಯತಿಯ ಮುಂದೆ ಕೈಜೋಡಿಸಿ ನಿಂತು "ಯತಿ ವರ್ಯರೆ ಪ್ರಾಣಾಂತಿಕ ಯಾತನೆಯಿಂದ ನರಳುತ್ತಿರುವ ನನ್ನ ತಂದೆ ಯನ್ನು ರಕ್ಷಿಸಬೇಕು" ಎಂದು ಬೇಡಿಕೊಂಡಳು. ಯತಿಯಾಗ ಬೀದಿ ಯಲ್ಲಿ ಬಿದ್ದಿದ್ದ ಪ್ರೇಮನಿಧಿಯನ್ನೊಮ್ಮೆ ನೋಡಿ "ಅಸ್ಪೃಶ್ಯೆ, ನಿನ್ನನ್ನೂ ನಿನ್ನ ತಂದೆಯನ್ನೂ ಮುಟ್ಟಲಾಗದು" ಎಂದು ಬಿಟ್ಟರು. ಆಗ ಸುಧಾಂ ಬುಧಿಯ ಪ್ರಾಣವೇ ಹಾರಿದಂತಾಯಿತು. ಆದರೂ ಅವಳು "ಮಹಾ ತ್ಮನೇ ಪತಿತರನ್ನು ಉದ್ಧರಿಸುವವರು ತಾವು. ಕ್ಷುದ್ರ ಜೀವಿಗಳಿಗೂ ಜೀವದಾನವನ್ನೀಡುವವರು. ಮನುಷ್ಯರಾದವರು ನಾವು ಆ ಕ್ಷುದ್ರಜೀವಿ ಗಳಿಗಿಂತಲೂ ಕಡೆಯಾದೆವೆ?" ಎಂದಳು.

ಅದಕ್ಕೆ ಯತಿಯು 'ನೀವು ಬಹಿಷ್ಕೃತರು, ಸಮಾಜಕ್ಕೆ ಬೇಡವಾದ ವರು, ನೀವು ಲೋಕಕ್ಕೆ ಬೇಡದವರು' ಎಂದು ಹೇಳಿ ಮೆತ್ತಗೆ ಹೆಜ್ಜೆ ಯಿಡುತ್ತಾ ಪರಿವಾರದೊಡನೆ ಮುಂದೆ ನಡೆದನು.

ಸುಧಾಂಬುಧಿಗೆ ದಿಕ್ಕೇ ತೋರಲಿಲ್ಲ. ತಾನು ಮಾನವ ಜನ್ಮದಲ್ಲಿ ಹುಟ್ಟಿದುದೇ ವ್ಯರ್ಥವೆಂದು ಅವಳಿಗೆ ತೋರಿತು. ತನ್ನ ತಂದೆಯನ್ನೊಮ್ಮೆ ನೋಡಿದಳು. ಅವನು ಪ್ರಾಣಾಂತಿಕ ಯಾತನೆಯಲ್ಲಿದ್ದಂತೆ ಅವಳಿಗೆ ಭಾಸವಾಯಿತು. ತನ್ನಿಂದ ತನ್ನ ತಂದೆಗೆ ಈ ಸಂಕಷ್ಟವು ಒದಗಿತೆಂದು ತಿಳಿದು ತನ್ನನ್ನು ತಾನೇ ಹಳಿದುಕೊಂಡಳು. ಶೋಕವು ಅವಳ ಹೃದಯ ವನ್ನು ಭೇದಿಸಿತು. ತನ್ನ ಜನ್ಮವನ್ನು ಹಳಿದಳು. ತಾನಿನ್ನು ಜೀವಿಸಿರು

ವುದೇ ವ್ಯರ್ಥವೆಂದು ನಿಶ್ಚಯಿಸಿ ತಂದೆಯ ದರ್ಶನವನ್ನು ಮಾಡಿ ಕಾವೇರಿ ನದಿಯ ಕಡೆ ಹುಚ್ಚಿಯಂತೆ ಓಡಿದಳು. ಪ್ರೇಮನಿಧಿಯು ಬೀದಿಯ ಮುಗ್ಗುಲಲ್ಲೇ ಬಿದ್ದುಕೊಂಡಿದ್ದನು.

ಪಾಪನಾಶಿನಿ ಕಾವೇರಿಯು ಮಂದಹಾಸದಿಂದ ಹರಿಯುತ್ತಿದ್ದಳು. ದೂರದಲ್ಲಿ ಸಮುದ್ರರಾಜನು ಗರ್ಜಿಸುತ್ತಿದ್ದನು. ಸುಧಾಂಬುಧಿಯು ಕಾವೇರಿಯ ದಡದಲ್ಲಿ ನಿಂತು 'ಎಲೈ ಕಾವೇರಿಯೇ ನಾನು ಲೋಕಕ್ಕೆ ಬೇಡವಾದವಳು. ನೀನಾದರೂ ನನ್ನನ್ನು ಕರಕೊಳ್ಳಲಾರೆಯಾ? ಸಮಾಜವು ಬಹಿಷ್ಕಾರ ಹಾಕುವುದಂತೆ. ತಮ್ಮ ಇಂದ್ರಿಯ ತೃಪ್ತಿಯನ್ನು ಮಾಡಿಕೊಳ್ಳುವುದಕ್ಕಾಗಿ ಜನರು ಸಮಾಜವೆಂಬ ರಾಕ್ಷಸವನ್ನು ಕಲ್ಪಿಸಿ ತಮಗನುಕೂಲವಾಗುವಂತೆ ಅದನ್ನು ಕುಣಿಸುತ್ತಿರುವರು. ತಾವೆಲ್ಲರೂ ಮನುಷ್ಯರೆಂಬ ಭಾವನೆಯೇ ಅವರಲ್ಲಿಲ್ಲ. ಇರಲಿ, ಈ ಕಾವೇರಿ ಪಟ್ಟಣದ ಜನರೇ ಸಮಾಜದ ಶುಷ್ಕ ಪದ್ಧತಿಗಳನ್ನು ಜಟ್ಟದಾಕಾರಮಾಡಿ ದೀನ ಜನರಿಗೆ ಅನೇಕ ಸಂಕಷ್ಟಗಳನ್ನು ತಂದೊಡ್ಡುತ್ತಿರುವರು. ಅಜ್ಞಾನವೆಂಬ ಅಂಧಕಾರದಲ್ಲಿ ಅವರು ಅಲೆದಾಡುತ್ತಿರುವರು. ಮೋಸಗಾರರೂ ವಿವೇಕ ಶೂನ್ಯರೂ, ಕೃತ್ರಿಮೋಪಾಯಗಾರರೂ ಮನುಷ್ಯಭಾವನಾರಹಿತರೂ ಆದ ಈ ಮನುಷ್ಯರು ಅವರ ಸಮಾಜದೊಡನೆ ಇಂದಿಗೊಂದು ವರ್ಷದೊಳಗಾಗಿ ನಿನ್ನ ನೀರಿಂದ ತೊಳೆದುಹೋಗಲಿ' ಎಂದು ಕೈಯೆತ್ತಿ ಶಪಿಸಿ ಕಾವೇರಿ ನದಿಗೆ ಧುಮಕಿದಳು—

ಅಷ್ಟರಲ್ಲಿ ಒಂದು ಕೈಯು ಅವಳ ತುರುಬನ್ನು ಹಿಂದಿನಿಂದ ಹಿಡಿದು ಅವಳು ನೀರೊಳಗೆ ಬೀಳದಂತೆ ತಡೆಯಿತು. ಸುಧಾಂಬುಧಿಯು ಹಿಂದಿರುಗಿ ನೋಡಿದಳು. ಓರ್ವ ಬೌದ್ಧ ಯತಿವರ್ಯನು ಅಲ್ಲಿ ನಿಂತಿದ್ದನು. ಅವನ ಬಾಯಿಂದ, 'ತಂಗೀ ಏನನರ್ಥ!' ಎಂಬ ವಾಣಿಯು ಹೊರಟಿತು. ಸುಧಾಂಬುಧಿಯು. ಮಹಾತ್ಮನೇ, ನಾನು ಲೋಕಕ್ಕೆ ಬೇಡವಾದವಳು. ನನ್ನನ್ನೇಕೆ ತಡೆಯುವೆ, ನನ್ನನ್ನು ಬಿಡು, ಕಾವೇರಿಯನ್ನು ಕಲೆಯುವೆನು' ಎಂದಳು. ಬೌದ್ಧ ಯತಿಯು, ವಿನಯ ವಾಣಿಯಿಂದ-'ಅದೇಕೆ? ಸುಳ್ಳು ಸಮಾಜಕ್ಕೆ ನೀನು ಬೇಡವಾಗಿದ್ದರೆ ಬೌದ್ಧದೇವನಿಗೆ ನೀನು ಬೇಕಾಗಿರುವೆ' ಎಂದನು ಸುಧಾಂಬುಧಿಗೆ ಆಶ್ಚರ್ಯವಾಯಿತು. ಅಲ್ಲದೆ ತಾನೂ

ಸಮಾಜಕ್ಕೆ ಅವಶ್ಯವಾಗಿ ಬೇಕಾದವಳೆಂದು ಕೇಳಿ ಹರ್ಷಿತಳಾದಳು. ಬೌದ್ಧದೇವನ ಚರಿತ್ರೆಯನ್ನೂ ಬೌದ್ಧಧರ್ಮವನ್ನೂ ಅವಳು ಮೊದಲೇ ಕೇಳಿದ್ದಳು ಒಡನೆ ಅವಳು ಕೈಜೋಡಿಸಿ-"ಮಹಾತ್ಮಾ ನಾನೆಂದೂ ಬರಲಾರೆನು. ನನ್ನನ್ನು ಅತಿ ಪ್ರೇಮದಿಂದ ಕಾಣುತ್ತಿದ್ದ ತಂದೆಗೇ ನಾನು ಮೃತ್ಯುಪ್ರಾಯಳಾದೆನು. ನಾನು ಜೀವಿಸಿ ಫಲವಿಲ್ಲ. ಆದ್ದರಿಂದ ನನ್ನ ಕೋರಿಕೆಯನ್ನು ಸಲ್ಲಿಸಲು ಅಪ್ಪಣೆಯನ್ನೀಯಬೇಕು"ಎಂದು ನುಡಿದಳು. ಯತಿವರ್ಯನು 'ಮಗಳೇ ವ್ಯಸನಪಡಬೇಡ. ಬೌದ್ಧ ದೇವನ ಮಹಿಮೆಯು ಅಗಾಧವಾಗಿರುವುದು, ನಿನ್ನ ತಂದೆಯೇ ನಿನ್ನ ಬರವನ್ನು ಕಾದುಕೊಂಡಿರುವನು" ಎಂದನು. ಆ ಮಾತನ್ನು ಕೇಳಿದ ಕೊಡಲೆ ಸುಧಾಂಬುಧಿಯು ಆನಂದಪರವಶಳಾದಳು. ತನ್ನ ತಂದೆಯು ಜೀವಂತನಾಗಿರುವನೋ ಇಲ್ಲವೆ ಮೃತನಾಗಿರುವನೋ ಎಂದು ವಿಚಾರಿಸದೆ ತಂದೆಯನ್ನು ನೋಡುವ ಉದ್ವೇಗದಿಂದ ಪಟ್ಟಣದ ಕಡೆ ಧಾವಿಸಿದಳು. ಆ ಬೌದ್ಧ ಯತಿವರ್ಯನು ಹಿಂಬಾಲಿಸಿದನು.

ಈರ್ವರೂ ಸ್ವಲ್ಪ ಸಮಯದಲ್ಲೇ ಚೈತ್ಯಾಲಯವನ್ನೊಂದನ್ನು ಸೇರಿದರು. ಅದರೊಳಗೆ ಬೌದ್ಧ ಭಿಕ್ಷುಗಳು ಕುಳಿತುಕೊಂಡಿದ್ದರು. ಅವರ ಮಧ್ಯೆ ಪ್ರೇಮನಿಧಿಯು ನಿಂತಿದ್ದನು. ಸುಧಾಂಬುಧಿಯು ಪ್ರವೇಶಿಸಿದ ಕೂಡಲೇ ಪ್ರೇಮನಿಧಿಯು ಅವಳನ್ನು ತಬ್ಬಿಕೊಂಡು ಅತ್ತನು. ಸುಧಾಂಬುಧಿಯ ಕಣ್ಣುಗಳಲ್ಲಿಯೂ ನೀರು ಸುರಿಯಿತು. ಅಷ್ಟರಲ್ಲಿ ಆ ಬೌದ್ಧ ಯತಿವರ್ಯನು, "ತಂಗೀ ನಿನ್ನ ಸೇವೆಯು ಲೋಕಕ್ಕೆ ಬೇಕಾಗಿದೆ. ಇಗೋ ನಿನ್ನ ತಂದೆಯ ಇಚ್ಛೆಯಂತೆ ಈ ವಸ್ತ್ರವನ್ನು ತಂದಿಟ್ಟಿರುವೆನು" ಎಂದು ಹೇಳುತ್ತಾ ಮುಂದೆ ಇಟ್ಟಿದ್ದ ಭಿಕ್ಷುಗಳ ಪೋಷಾಕನ್ನು ತೋರಿಸಿದನು. ಸುಧಾಂಬುಧಿಯು ಬೌದ್ಧ ಭಿಕ್ಷುವಾದಳು. ಅವಳ ತಂದೆಯು ಮೊದಲೇ ಭಿಕ್ಷುವಾಗಿದ್ದನು. ಆದರೆ ತನ್ನ ತಂದೆಯು ಅಲ್ಲಿಗೆ ಹೇಗೆ ಬಂದನೆಂದು ವಿಸ್ಮಯ. ಆ ವಿಸ್ಮಯವನ್ನು ಯತಿವರ್ಯನು ನೋಡಿ-"ತಂಗೀ ನಿನ್ನ ಮನಸ್ಸಿನ ಅಪೇಕ್ಷೆಯನ್ನು ತಿಳಿದಿರುವೆನು. ನಾನು ಭಿಕ್ಷಾಟನೆಗಾಗಿ ಬೀದಿಯಲ್ಲಿ ತಿರುಗುತ್ತಿರುವಾಗ ನಿನ್ನ ತಂದೆಯು ಬೀದಿಯಲ್ಲಿ ಬಿದ್ದಿದ್ದದನ್ನು ಕಂಡೆನು. ಕೂಡಲೇ ನನ್ನ ಶಿಷ್ಯರ ಸಂಗಡ ಅವನನ್ನಿಲ್ಲಿಗೆ ಕಳುಹಿಸಿ

ಕೊಟ್ಟು ತಕ್ಕ ಉಪಚಾರಕ್ಕೆ ಅನುಕೂಲಮಾಡಿಸಿರುವೆನು" ಎಂದನು. ಆಗ ಸುಧಾಂಬುಧಿಗೆ ಬೌದ್ಧದೇವನೇ ಅವಳ ಮುಂದೆ ನಿಂತಂತೆ ತೋರಿತು. ತಂದೆಯೂ ಮಗಳೂ ಯತಿಯ ಉಪಕಾರವನ್ನು ಸ್ಮರಿಸಿ ಆನಂದದಿಂದ ಕುಣಿದರು. ಅನಂತರ ತಮ್ಮ ಜೀವನವನ್ನು ಮನುಷ್ಯಸೇವೆಗೆ ಧಾರೆ ಯೆರೆದರು. ಸುಧಾಂಬುಧಿಯು ಬೌದ್ಧಧರ್ಮವನ್ನು ಲಂಕಾಪಟ್ಟಣದಲ್ಲಿ ಹಬ್ಬಿಸಿದಳು.

ಆದರೆ ಸುಧಾಂಬುಧಿಯ ಶಾಪವು ಸುಳ್ಳಾಗುವುದೇ? ಹೃದಯವೇದನೆ ಯಿಂದ ಹೊರಟ ಅವಳ ಮಾತುಗಳು ಕಾವೇರಿ ಜಲಕಣಗಳ ಗರ್ಭವನ್ನು ಸೇರಿ ಉಬ್ಬಿದವು. ಪರೋಪಕಾರಕ್ಕಾಗಿಯೇ ಜನ್ಮವೆತ್ತಿದ್ದ ಕಾವೇರಿಯು ತನ್ನ ಭಕ್ತಳೊಬ್ಬಳಿಗುಂಟಾದ ಹಾನಿಯನ್ನು ನೋಡಿ ಕಾವೇರಿಪಟ್ಟಣದ ಪೊಳ್ಳುಸಮಾಜವನ್ನು ಹೀರಲು ಸನ್ನದ್ಧಳಾದಳು. ವರುಷವೊಂದರೊಳ ಗಾಗಿ ಕಾವೇರಿಪಟ್ಟಣವನ್ನೇ ತನ್ನ ನೀರಿನಿಂದ ತೊಳೆದುಬಿಟ್ಟಳು. ಅಟ್ಟ ಹಾಸದಿಂದ ಪುರಾತನ ಸಂಪ್ರದಾಯದ ಹೀನ ಪದ್ಧತಿಗಳಿಂದ ತುಂಬಿದ್ದ ಕಾವೇರೀ ಪಟ್ಟಣವು ಜಲಮಯವಾಯಿತು- ಆದರೆ ಸುಧಾಂಬುಧಿಯು ಮಾತ್ರ ಜ್ಞಾನಮಯಳಾದಳು.

ಇಂದು ಕಾವೇರಿ ಪಟ್ಟಣವು ಜಲದೊಳಗಿದೆ. ಆದರೆ ಸುಧಾಂಬು ಧಿಯು ಲಂಕಾಪಟ್ಟಣದಲ್ಲಿರುವಳು. ಇನ್ನೊಮ್ಮೆ ಸುಧಾಂಬುಧಿಯು ಜನ್ಮವೆತ್ತಳೇ?

**ರಂಗನಾಥ.**



# ೩. ನಶ್ವರ ಸಂಸಾರ

ಸಂಧ್ಯಾಕಾಲ. ನವಾನಗರದ ಭುವನೇಂದ್ರ ವಿದ್ಯಾರ್ಥಿಭವನವು ಎಂದಿಗಿಂತಲೂ ಇಂದು ಶಾಂತವಾಗಿತ್ತು. ವಿದ್ಯಾರ್ಥಿಗಳನೇಕರು ಗಾಳಿಯನ್ನು ಸೇವಿಸಲು ಅತ್ತಿತ್ತ ಅಡ್ಡಾಡುತ್ತಿದ್ದರು. ಕೆಲವರು ಸಂಧ್ಯಾಕಾಲವಾದರೂ, ಅದನ್ನು ಗಣಿಸದೆ, ತಮ್ಮ ಕೋಣೆಗಳಲ್ಲಿ ಆಸೀನರಾಗಿ, ಪಾಠಪ್ರವಚನದಲ್ಲಿಯೇ ತಲ್ಲೀನರಾಗಿದ್ದರು. ದಿನನಿತ್ಯವೂ ಆಟವಾಡಲಿಕ್ಕೆ ಉಪಯೋಗಿಸುತ್ತಿದ್ದ 'ಕೇರಂ ಬೋರ್ಡು' ಅಂದು ಒಂದು ಮೇಜಿನ ಮೇಲೆ ಬಿದ್ದಿತ್ತು. ಅಂದು ಯಾರೂ ಅದರ ಗೊಡವೆಗೆ ಹೋದಂತೆ ತೋರುತ್ತಿರಲಿಲ್ಲ. ಅಷ್ಟರಲ್ಲೇ ಇಬ್ಬರು ವ್ಯಕ್ತಿಗಳು ಅದೇ ಮೇಜನ್ನು ಸಮೀಪಿಸಿ, ಎದುರಿಗಿದ್ದ ಎರಡು ಕುರ್ಚಿಗಳನ್ನು ಎಳೆದು ಕುಳಿತುಕೊಂಡರು. ಅವರ ದೃಷ್ಟಿಯು ಮೇಜಿನ ಮೇಲಿದ್ದ 'ಕೇರಂ ಬೋರ್ಡಿನ' ಕಡೆಗೆ ತಿರುಗಿತು. ವ್ಯಕ್ತಿಗಳಲ್ಲಿ ಒಬ್ಬನು ಸಾಧಾರಣ ಇಪ್ಪತ್ತು ವರುಷ ಪ್ರಾಯದ ಸುಂದರ ತರುಣನು. ನವನಾಗರೀಕತೆಯ ವಾತಾವರಣದಲ್ಲಿ ಬೆಳೆದವನಾಗಿದ್ದು, ಕಾಲಸ್ಥಿತಿಯನ್ನನುಸರಿಸಿ, ಸ್ವಚ್ಛವಾದ ಉಡುಗೆ ತೊಡಿಗೆಗಳನ್ನು ಧರಿಸಿದ್ದನು. ಮುಗುಳ್ನಗೆಯು ಆತನ ಮುಖಮಂಡಲದಲ್ಲಿ ತೇಲಾಡುತ್ತಿತ್ತು. ಇನ್ನೊಂದು ಸ್ತ್ರೀವ್ಯಕ್ತಿ. ವಯಸ್ಸು ೧೬–೧೭ ಇರಬಹುದು. ಸುಂದರಿಯೂ, ಸುರೂಪಿಯೂ, ಸುಲಕ್ಷಣಯುಕ್ತೆಯೂ ಆಗಿದ್ದಳು. ಗುಂಗುರುಗುಂಗುರಾದ ಕೇಶರಾಶಿಯು ಗಾಳಿಗೆ ಅತ್ತಿತ್ತ ಸರಿದಾಡುತ್ತಿತ್ತು. ಕರ್ಣಗಳಲ್ಲಿದ್ದ ಮನೋಹರವಾದ ಲೋಲಕುಗಳು ತಮ್ಮ ಕಾಂತಿವಿಶೇಷದಿಂದ ಗಾಳಿಗೆ ಅತ್ತಿತ್ತ ಹರಿದಾಡುತ್ತಿದ್ದ ಕೂದಲ ರಾಶಿಯನ್ನು ಬೆದರಿಸುವಂತೆ ತೋರುತ್ತಿದ್ದುವು. ರಮಣಿಯು ನಿರ್ಮಲವಾದ ಹಾಗೂ ಶುಭ್ರವಾದ ತೆಳುವಸನವನ್ನು ಧರಿಸಿದ್ದು ಈಗಿನ ಕಾಲದ ಚೊಕೊಲೆಟ್ ಲೇಡಿಯರಿಗೆ ಮಾದರಿಯಾಗಿದ್ದಳು. ಇರಲಿ, ಅವರಿಬ್ಬರೂ ಕೇರಂ ಬೋರ್ಡನ್ನು ತಮ್ಮ ಸಮೀಪಕ್ಕೆ ಎಳೆದುಕೊಂಡರು.

ಸುಜಲೆ—ಪದ್ಮಶೇಖರಾ! ಒಂದೇ ಒಂದು ಆಟವನ್ನು ಆಡಿ ನಂತರ

ತಿರುಗಾಡಲಿಕ್ಕೆ ಹೋಗೋಣವಲ್ಲವೇ? ನನಗೆ ಇಂದು ಅತ್ಯಂತ ಬೇಸರವಾಗಿದೆ.

ಪದ್ಮಶೇಖರ—ನಿನ್ನ ಇಷ್ಟದಂತೆಯೇ ಆಗಲಿ, ಆದರೆ ಆಟದಲ್ಲಿ ನೀನು ಸೋತು ಹೋದೆಯಾದರೆ? ಏನಾದರೂ ಪಣವುಂಟೆ?

ಸುಜಲೆ—ಆದನ್ನೆಲ್ಲಾ ಕಟ್ಟಿಕೊಂಡು ಈಗ ಮಾಡುವುದೇನು? ಆಡೋಣವೇ?

ಪದ್ಮಶೇಖರ—ಆಗಬಹುದು.

ಸರಿ, ಆಟಕ್ಕೆ ಪ್ರಾರಂಭವಾಯಿತು; ಆಟದ ಮಧ್ಯದಲ್ಲಿ ಮಾತಿಗೂ ಪ್ರಾರಂಭವಾಯಿತು.

ಸುಜಲೆ—ಶೇಖರಾ! ನೀನು ಮದ್ರಾಸಿಗೆ ಹೋಗಲಿರುವೆಯಲ್ಲವೇ? ಆದರೂ ಬಿ. ಎ., ಪರೀಕ್ಷೆಯ ಫಲಿತಾಂಶವು ಹೊರಬೀಳಬೇಕಲ್ಲವೇ? ಇಷ್ಟರಲ್ಲೇ ಹೋಗಲಿರುವೆಯೋ?

ಪದ್ಮ—ನಾನು ಪರೀಕ್ಷೆಯಲ್ಲಿ ಪಾಸಾಗಬಾರದೆಂದೋ ನಿನ್ನ ಮನಸ್ಸು? ನಾನು ಇಲ್ಲಿಯೇ ಇರಲಿಕ್ಕೆ ನೀನು ಬಯಸುವಂತೆ ತೋರುತ್ತದೆ.

ಸುಜಲೆ—ಏನು? ಅದನ್ನು ಮನಸ್ಸಿಗೆ ಹಚ್ಚಿಕೊಂಡೆಯಾ? ನಾನು ನಿಜವಾಗಿಯೂ, ನಿನ್ನೊಂದಿಗೆ ಕೇಳಿದೆನಾದರೆ, ಅದನು ನೀನು ವಿಪರೀತವಾಗಿ ಕಲ್ಪಿಸಿಕೊಳ್ಳಬಹುದೆ? ನಾನು ನನ್ನ ಆತ್ಮವನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ನಿನ್ನನ್ನು ಪ್ರೀತಿಸುವೆನೆಂಬುದನು ಅರಿಯೆಯಾ? ನೀನು ಪರೀಕ್ಷೆಯಲ್ಲಿ ಉತ್ತೀರ್ಣನಾಗುವುದು ನನಗೆ ಸಂತೋಷವಲ್ಲವೆಂದೆಣಿಸುವೆಯಾ?

ಪದ್ಮ—ನಾನೇನು ಹಾಗೆ ಮಾಡಿದೆನೇ ಸುಜಲಾ! ಮಾತಿಗೆ ಪ್ರತಿಮಾತನ್ನಾಡಿಬಿಟ್ಟೆನು ಅಷ್ಟೆ. ಅದಕ್ಕಾಗಿ ಇಷ್ಟೊಂದು ಗರ್ಜನೆಯೇ?

ಸುಜಲೆ—ನೀನು ತಿಳಿಯೆ, ಶೇಖರಾ! ಮಾನಿನಿಯ ಹೃದಯದ ಆಳವನ್ನು ನೀನು ತಿಳಿಯೆ. ನಿನ್ನನ್ನು ನಾನು ಎಷ್ಟು ಪ್ರೀತಿಸುತ್ತಿರುವೆನು! ನಿನ್ನ ಶ್ರೇಯಸ್ಸನ್ನೆಷ್ಟು ಬಯಸುತ್ತಿರುವೆನು! ನಿನ್ನ ಶ್ರೇಯೋಭಿವೃದ್ಧಿಯೇ ನನ್ನ ಶ್ರೇಯೋಭಿವೃದ್ಧಿಯಲ್ಲವೇ? ದೇಹದ ಒಂದು ಅಂಗವು ಬೇನೆಯಿಂದ

ಬಾಧಿಸಲ್ಪಡುವಾಗ, ಇನ್ನೊಂದು ಪಾರ್ಶ್ವವು ನೆಮ್ಮದಿಯಿಂದಿರುವುದೇ? ಅದನ್ನಾದರೂ ತಿಳಿಯೆಯಾ?

ಪದ್ಮ—ಸುಜಲೇ ಏನೆಲ್ಲ ಹರಟೆಯಿದು. ನಾನು ಯಾರು, ನೀನು ಯಾರು ಎಂಬುದನ್ನು ಚೆನ್ನಾಗಿ ಮನಸ್ಸಿಗೆ ತಂದುಕೊಳ್ಳು. ನನಗೂ ನಿನಗೂ ಮಧ್ಯೆ ಸಾಗರದ ಅಂತರವಿರುವುದು. ನೀನು ಜಾತಿಯಲ್ಲಿ ನನಗಿಂತ ಉತ್ತಮಳು. ನಿನ್ನ ಸರಿಸಮಾನತೆಯಲ್ಲಿರುವ ಹಕ್ಕು ನನಗಿರುವುದೇ? ಇಲ್ಲಿಗೆ ಬಂದು ಹೋಗುತ್ತಿದ್ದು, ನನ್ನೊಂದಿಗಿರುವ ಗುರುತನ್ನು ವೃಥಾ ಗಡುತರವಾಗಿ ಭಾವಿಸಬೇಡ. ಇದರಿಂದ ನಿನ್ನ ಭವಿಷ್ಯ ಜೀವನವು ಕೆಡುವುದು. ನಿನ್ನ ನವಯೌವನಾಕಾಶದಲ್ಲಿ, ಕಾರ್ಮೋಡಗಳಿರುವುವು. ನಿನ್ನ ಹಿತದೃಷ್ಟಿಯಿಂದ ಇಷ್ಟೊಂದು ಹೇಳಬೇಕಾಯಿತು ತಿಳಿಯಿತೆ?

ಸುಜಲೆ—ಶೇಖರಾ! ಹಾಗಾದರೆ ನೀನು ನನ್ನನ್ನು ಪ್ರೀತಿಸುವುದೇ ಇಲ್ಲವೇ?

ಪದ್ಮ—ಹಾಗೆಣಿಸದಿರು. ನನ್ನ ಹೃದಯವನ್ನು ಬಿಡಿಸಿ ನಿನ್ನ ಮುಂದಿಡುವ ಸಾಮರ್ಥ್ಯವು ನನ್ನಲ್ಲಿರುತ್ತಿದ್ದರೆ, ಹಾಗೆ ಎಂದೋ ಮಾಡುತ್ತಿದ್ದೆನು. ನೀನು ನನ್ನ ಹೃದಯಮಂದಿರವನ್ನು ತೆರೆದು, ಅದರಲ್ಲಿ ದೀಪ ಹಿಡಿದು ಹುಡುಕಿದರೂ, ನಿನ್ನಲ್ಲಿ ನಾನು ದ್ರೋಹವನ್ನೆಣಿಸಿದೆಯೆಂದು ನೀನು ಕಂಡು ಹಿಡಿಯಲಾರೆ. ಪ್ರಿಯೇ ಸುಜಲೆ! ನಿನ್ನನ್ನು ನಾನು ಮನಃಪೂರ್ವಕವಾಗಿಯೂ ಪ್ರೀತಿಸುತ್ತಿರುವೆನು. ನಿನ್ನ ಆದರ್ಶಗುಣಗಳಿಗೆ ನಾನು ಚಿರಋಣಿಯು. ನಿನ್ನಂತಹ ಸಕಲ ಗುಣಯುತೆಯಾದ ಪತ್ನಿಯು ನನಗೆ ಲಭಿಸಿದುದೇ ಆದರೆ, ನನ್ನ ಸಂಸಾರ ಸಾಗರವನ್ನು ಅಲ್ಲೋಲ ಕಲ್ಲೋಲಗೊಳಿಸುವ ತೆರೆಗಳು ಏಳಲಿಕ್ಕೇ ಇಲ್ಲ. ಆದರೆ, ಈ ಸಂದರ್ಭದಲ್ಲಿ, ನಿನ್ನ ಪ್ರೀತಿಯನ್ನು ನಾನು ಸ್ವೀಕರಿಸುವುದಾದರೂ ಹೇಗೆ?

ಸುಜಲೆ—ಹಾಗೆನ್ನದಿರು, ಶೇಖರಾ! ನನ್ನ ಅಂತರಾತ್ಮವು ಒಂದೇ ಮಾತು, ಒಂದೇ ಮನಸ್ಸು ಮತ್ತು ಒಂದೇ ಅಭಿಪ್ರಾಯವುಳ್ಳದ್ದು. ನಿರ್ಲಜ್ಜೆಯೆಂದೆಣಿಸದಿರು. ನಿನ್ನಲ್ಲಿ ನನ್ನ ಮನಸ್ಸು ನೆಟ್ಟು ಹೋಗಿದೆ. ಅದನ್ನು ಹಿಂತೆಗೆಯಲಿಕ್ಕೆ ಪ್ರಯತ್ನಿಸಿದರೆ, ನಾನು ಭಾರತ ರಮಣಿಯರ ವರ್ಗದಲ್ಲಿ ಪರಿಗಣಿಸಲ್ಪಡಲು ಯೋಗ್ಯಳಲ್ಲ. ಯಾರಲ್ಲಿ ನಿಶ್ಚಲವಾದ

ಪ್ರೇಮವೂ, ನಿಷ್ಕಲ್ಮಷ ಮನಸ್ಸೂ ಉಂಟೋ, ಅಲ್ಲಿ ಉಂಟಾಗುವ ಬಂಧವೇ ಲಗ್ನವು; ಅವುಗಳೆಲ್ಲಾ ನಾಸ್ತಿಯಾಗಿದ್ದು, ಶಾಸ್ತ್ರರೀತಿಯಾಗಿಯೇ ಆದ ಮಂಗಲಕಾರ್ಯವಾದರೂ, ಲಗ್ನವಲ್ಲ; ಅದು ಭಗ್ನವು. ಉಚ್ಚ ವಿದ್ಯಾಭ್ಯಾಸವನ್ನು ಕಲಿತು, ಮುಂದಕ್ಕೆ ಭಾರತದ ಸ್ವಾತಂತ್ರ್ಯಕ್ಕೆ ಹೋರಾಡತಕ್ಕವನು ನೀನು. ಅಂತಹ ನೀನು ಜಾತಿ, ಮತ, ಭೇದಗಳನ್ನೆಣಿಸಿ, ನಿಶ್ಚಲವಾದ ಪ್ರೇಮಕ್ಕೆ ಭಂಗವನ್ನು ತಂದೊಡ್ಡಿದೆಯಾದರೆ, ಅಬಲೆಯಾದ ನಾನೇನು ಮಾಡಲಾಪೆನು, ನೀನೇ ಹೇಳು!

ಪದ್ಮ—ಸುಜಲಾ! ನಾನು ಮನುಷ್ಯಪ್ರಾಣಿಯೇ ಅಲ್ಲವೆಂದು ತಿಳಿದಿರುವೆಯೇನು? ನಿನ್ನಲ್ಲಿ ನನಗೆ ಪ್ರೀತಿಯೂ ಇದೆ; ಅನುರಾಗವೂ ಇದೆ. ಆದರೆ, ಇದರಿಂದ, ಎಂತಹ ಕ್ರಾಂತಿಯುಂಟಾಗುವುದೆಂದು ತಿಳಿದಿರುವೆಯಾ? ನಿನ್ನ ಜೀವನವು ವೃಥಾ ಕೆಟ್ಟುಹೋಗುವುದು. ನನ್ನ ಕೈಹಿಡಿದು ನೀನು ಸುಖವಾಗಿ ಬಾಳಲಾರೆ. ನೀನು ಈ ಅನಾಹುತಗಳಿಂದುಂಟಾಗುವ ಕಷ್ಟದುಃಖಗಳನ್ನು ಸೈರಿಸುವಷ್ಟು ಶಕ್ತಿಯುಳ್ಳವಳಲ್ಲ. ನಿನಗೆ ಯಾಕೆ ಮುಂದಾಲೋಚನೆಯಿಲ್ಲ?

ಸುಜಲೆ—ಶೇಖರಾ! ಹಾಗೆನ್ನದಿರು. ನಾನು ಅವುಗಳನ್ನೆಲಾ ತಿಳಿದೇ ನಿನ್ನಲ್ಲಿ ಅನುರಾಗಿಣಿಯಾಗಿರುವೆನು. ನೀನು ನನ್ನ ಆಶೆಯನ್ನು ನಿರಾಕರಿಸಿದೆಯಾದರೆ, ವೃಥಾ ಅಬಲೆಯೊಬ್ಬಳ ಪ್ರಾಣಾಪಹಾರಕ್ಕೆ ಪ್ರಯತ್ನಿಸಿದಂತಾಗುವುದು. ನಿನ್ನ ಹೆಗಲಿಗೆ ಬಿದ್ದ ಅಬಲೆಯನ್ನು ರಕ್ಷಿಸಲಾರೆಯೇಕೆ?

ಪದ್ಮ—ಹೇಗಾದರೂ ಆಗಲಿ ಸುಜಲಾ! ನಿನಗೆ ದೇವರೇ ಸಹಾಯಕನಾಗಿರಲಿ. ನಾನು ನಿನ್ನಿಷ್ಟಕ್ಕೆ ಎದುರಾಗಲಾರೆ.

'ಕೇರಂ ಬೋರ್ಡು' ಅಲ್ಲೇ ಉಳಿಯಿತು. ಇವರ ಮಾತುಕತೆ ಮುಗಿಯಲೇ ಇಲ್ಲ; ಮುಂದುವರಿಯುತ್ತಲೇ ಇತ್ತು. ಫಕ್ಕನೆ ಯಾರೋ ಬಂದ ಸದ್ದಾಯಿತು. ಕೂಡಲೇ, ಇವರು ತಮ್ಮ ಪ್ರೇಮ ಸಂಭಾಷಣೆಯನ್ನು ನಿಲ್ಲಿಸಿ, ಹೊರ ಹೊರಟುಹೋದರು.

೦೦ ೦೦ ೦೦

ತಿಂಗಳೊಂದು ಕಳೆಯಿತು. ಪರೀಕ್ಷೆಯ ಫಲಿತಾಂಶವು ಹೊರ

ಬೀಳುವ ದಿನವು ಮೆಲ್ಲಗೆ ಸಮೀಪಿಸಿತು. ಪದ್ಮಶೇಖರನು ತನ್ನ ಕೋಣೆ ಯಿಂದ ಹೊರ ಹೊರಡಲಾರದಾದನು. ಯಾವುದೂ ಆತನ ಮನಸ್ಸಿಗೆ ಸರಿ ಹೋಗಲಿಲ್ಲ. ಸಾಯಂಕಾಲವಾದರೂ ಹೊರಗೆ ಹೊರಡುವ ಅಭ್ಯಾಸವನ್ನೇ ನಿಲ್ಲಿಸಿ ಬಿಟ್ಟನು. ಪರೀಕ್ಷೆಯ ಫಲಿತಾಂಶವಾದರೂ ಬಂದೇ ಬಂತು. ಇಬ್ಬ ರಿಗೂ ಅಭಿನಂದನೆಗಳು. ಇಬ್ಬರೂ ಉತ್ತೀರ್ಣರಾಗಿದ್ದರು. ಉಭಯರೂ, ಸಂತೋಷ ಸಾಗರದಲ್ಲಿ ತೇಲಾಡಿದರು. ಸುಜಲೆಯು ಈ ಸಮಯದಲ್ಲಿ ಶೇಖರನ ಭಾಷೆಯನ್ನು ಪ್ರತಿಕ್ಷಣಕ್ಕೂ ನೆನಪಿಗೆ ತರುತ್ತಿದ್ದಳು. ಆತನೂ, ಆರ್ದ್ರ ಮನಸ್ಸಿನಿಂದ ಆಕೆಗೆ ಉತ್ತರವನ್ನೀಯುತ್ತಿದ್ದನು. ಶೇಖರನು ತಾನು ಮೊದಲೇ ನಿಶ್ಚಯಿಸಿದ್ದಂತೆ ಬಿ. ಎಲ್.,ಗೆ ಮದ್ರಾಸಿಗೆ ಹೋಗಲು ಮನಸ್ಸು ಮಾಡಿದನು. ಸುಜಲೆಯೂ, ತನ್ನ ಅಭ್ಯಾಸವನ್ನು ಅಷ್ಟಕ್ಕೇ ನಿಲ್ಲಿಸಲು ಮನಸ್ಸಿಲ್ಲದೆ, ಅದನ್ನು ಮುಂದುವರಿಸಲು ಆತುರಗೊಂಡಳು. ಆದರೆ, ಆಕೆಯ ಪಿತನ ಪತ್ರವು ಆಕೆಯನ್ನು ಸಂಪೂರ್ಣ ನಿರಾಶೆಗೊಳಿ ಸಿತು. ಆ ಪತ್ರದಲ್ಲಿ ಸುಜಲೆಯು ಪರೀಕ್ಷೆಯಲ್ಲಿ ಉತ್ತೀರ್ಣಳಾದುದಕ್ಕೆ, ಸಂತೋಷವನ್ನು ಸೂಚಿಸಿ, ಅಷ್ಟೇ ವಿದ್ಯಾಭ್ಯಾಸವು ಸಾಕೆಂದೂ ಅನು ರೂಪನಾದ ವರನನ್ನು ನಿಶ್ಚಯಿಸಿ, ಮದುವೆ ಮಾಡುವೆನೆಂದೂ ಬರೆದಿತ್ತು. ಆದರೆ, ಸುಜಲೆಯು ಇದನ್ನು ಉಪಾಯದಿಂದ ತಪ್ಪಿಸಿಕೊಂಡಳು. ತಾನು ಇನ್ನೂ ಎರಡು ವರುಷ ಕಲಿಯಲಿಷ್ಟವುಳ್ಳವಳಾಗಿರುವೆನೆಂದೂ ಅಷ್ಟರ ವರೆಗೆ ತನಗೆ ಯಾವುದೊಂದು ತರದ ತೊಂದರೆಯನ್ನೂ ಕೊಡಬಾರ ದೆಂದೂ ಪ್ರತ್ಯುತ್ತರ ಬರೆದಳು. ತಂದೆಯು ಮಗಳ ಈ ರೀತಿಯ ಪತ್ರ ವನ್ನು ನೋಡಿ ಏನೂ ಆಶ್ಚರ್ಯಹೊಂದಲಿಲ್ಲ. ಮಗಳು ಇನ್ನೂ ಎರಡು ವರುಷದ ವಿದ್ಯಾಭ್ಯಾಸವನ್ನು ಮುಂದುವರಿಸಿದರೆ, ಬುದ್ಧಿವಿಕಾಸಹೊಂದು ವುದೆಂದೂ, ಅಲ್ಲದೆ, ಆದರಲ್ಲಿ ತನಗೇನು ನಷ್ಟವಿಲ್ಲೆಂದೂ, ಆಕೆಯ ಮನೋನಿರ್ಧಾರಕ್ಕೆ ಸಂಪೂರ್ಣ ಒಪ್ಪಿಗೆಯನ್ನಿತ್ತನು.

ಇತ್ತ ಶೇಖರ ಮತ್ತು ಸುಜಲೆಯರ, ಪರಸ್ಪರ ಅನುರಾಗದ ಸುದ್ದಿಯು ಭುವನೇಂದ್ರ ಭವನದಲ್ಲಿ ಕ್ರಮೇಣ ಹಬ್ಬತೊಡಗಿತು. ವಿದ್ಯಾ ರ್ಥಿಗಳು ಕೆಲವರು ತಮ್ಮಲ್ಲಿ ತಾವೇ ಸಂತೋಷಗೊಂಡರು. ಮತ್ತೆ ಕೆಲ ವರು ಆಶ್ಚರ್ಯಾನ್ವಿತರಾದರು. ಶೇಖರನ ಸ್ನೇಹಿತರನೇಕರು ಗಾಬರಿ

ಹೊಂದಿದರು. ಅಂತರ್ಜಾತೀಯ ವಿವಾಹವಾಗುವುದೆಂದರೆ, ಅದೇ ವಿಷಮ ವಿವಾಹವಲ್ಲವೇ? ಆದರಿಂದಾಗಿಯೇ ಎಲ್ಲರಲ್ಲಿಯೂ ಇಷ್ಟೊಂದು ಕುತೂಹಲ. ಸುಜಲೆಯು ಶೇಖರನನ್ನು ಕಾಣಲು ಬರುವುದೂ ಹೆಚ್ಚಾಯಿತು. ಈ ಸುದ್ದಿಯನ್ನು ಸುಜಲೆಯ ತಂದೆಯ ಕಿವಿಗೆ ಯಾರೋ ಹಾಕಿದರು. ರಾಮರಾಯರು ಮಗಳ ನಡತೆಯ ವಿಷಯದಲ್ಲಿ ಅನುಮಾನಪಟ್ಟು, ಆಕೆಯನ್ನು ಎರಡು ಮೂರು ಬಾರಿ ಎಚ್ಚರಿಸಿದರು. ಆಕೆಯು ಅತಿ ಜಾಗ್ರತೆಯಲ್ಲಿರಬೇಕೆಂದು ತಿಳಿಸಿಯೂ ಆಯಿತು. ಆದರೆ, ಪದ್ಮಶೇಖರ ಸುಜಲೆಯರ ಅನುರಾಗವು ದಿನದಿನಕ್ಕೂ ಬೆಳೆಯಿತು. ಶೇಖರನು ತನ್ನನ್ನು ವಿವಾಹಮಾಡಿಕೊಳ್ಳಲು ವಿಳಂಬಮಾಡಿದರೆ, ಮಹತ್ತಾದ ಹಾನಿಯೊದಗಬಹುದೆಂದು ಸುಜಲೆಯು ಅರಿತು, ತನ್ನನ್ನು ವರಿಸದೆ, ಆತನು ಮದ್ರಾಸಿಗೆ ಹೋಗಲೇಕೂಡದೆಂದು, ನಿರ್ಬಂಧಿಸಿದಳು. ಶೇಖರನು ನಿರ್ವಾಹವಿಲ್ಲದೆ ಒಪ್ಪಿಕೊಂಡನು. ಇನ್ನೇನು? ಆದರ್ಶರೀತಿಯಿಂದ ಅವರ ವಿವಾಹವು ನಡೆದೇ ಹೋಯಿತು. ಭವನದ ಅನೇಕ ವಿದ್ಯಾರ್ಥಿಗಳು ಈ ಸಮಾರಂಭದಲ್ಲಿ ಕುತೂಹಲಪೂರ್ವಕವಾಗಿ ಭಾಗಿಗಳಾಗಿ, ಸುಜಲಾ—ಶೇಖರರ ಅಭ್ಯುದಯವನ್ನು ಮನಃಪೂರ್ವಕವಾಗಿ ಕೋರಿದರು. ಅಂದಿಗೆ, ಸುಜಲಾ-ಶೇಖರರು ಪತಿಪತ್ನಿಯರಾದರು. ಸುಜಲೆಯ ಮಹತ್ತಾದ ಆಶೆಯು ಈಡೇರಿತು. ಆದರೆ ಸಮಾಜದ ತೀವ್ರ ಬಹಿಷ್ಕಾರವು ಆಕೆಯನ್ನು ಹಿಂಬಾಲಿಸಿತು.

ಸುಜಲೆಯ ತಂದೆಯಾದ ರಾಮರಾಯರು ನಿಷ್ಠಾವಂತ ಮನುಷ್ಯನೆಂದು ಇಲ್ಲಿ ಬೇರೆ ಹೇಳಬೇಕಾಗಿಲ್ಲ. ಅವರು ಮಗಳ ಈ ರೀತಿಯ ವರ್ತನೆಯನ್ನು ಕೇಳಿ ಅತ್ಯಂತ ಕ್ರೋಧಾನ್ವಿತರಾದರು. ಮಗಳಿಗೆ ಆಂಗ್ಲ ವಿದ್ಯಾಭ್ಯಾಸವನ್ನು ಕೊಟ್ಟುದರ ಫಲವೆಂದೆಣಿಸಿ, ಬಹಳ ಖೇದಪಟ್ಟರು. ಸಮಾಜದ ದಂಡಕ್ಕೆ ಭಯಪಟ್ಟು, ತನ್ನ ಮುಂದಿನ ಮಕ್ಕಳು ಸಮಾಜದ ವಕ್ರದೃಷ್ಟಿಗೆ ಬೀಳುವುದು ಬೇಡವೆಂದೆಣಿಸಿ, ಸುಜಲೆಯನ್ನು ಮನೆಗೆ ಕರೆಸುವುದೇ ಇಲ್ಲವೆಂದೂ, ಅವಳು ಇನ್ನು ತನಗೆ ಮಗಳಲ್ಲವೆಂದೂ, ತಾನು ಅವಳಿಗೆ ತಂದೆಯಲ್ಲವೆಂದೂ, ಪ್ರತಿಜ್ಞೆಮಾಡಿ, ಮಗಳೊಂದಿಗೆ

ಬದ್ಧ ದ್ವೇಷವನ್ನು ಕಟ್ಟಿಕೊಂಡುದಲ್ಲದೆ, ಪಿತ-ಪುತ್ರಿಯರ ಸಂಬಂಧ ವನ್ನೂ ಕಡಿದುಕೊಂಡರು.

ಂಂ ಂಂ ಂಂ

ಮಧ್ಯಾಹ್ನದ ಬಿಸಿಲು ಅತ್ಯಂತ ತೀವ್ರವಾಗಿತ್ತು. ತರಣಿಯ ತೀವ್ರ ವಾದ ಕಿರಣಗಳು ಧರಣಿಮಂಡಲದ ಮೇಲೆ ಬಿದ್ದು, ವಸುಂಧರೆಯು ಒಣಗಿಹೋಗಿದ್ದಳು. ಪದ್ಮಶೇಖರನು ಊಟವನ್ನು ತೀರಿಸಿ ಈಜಿಚೇರಿ ನಲ್ಲಿ ಆಸೀನನಾಗಿದ್ದನು. ಸುಜಲೆಯೂ ಅಲ್ಲೇ ಬದಿಯಲ್ಲಿ ಕುಳಿತು ಕೊಂಡು, ಶೇಖರನ ಮಾತುಕತೆಗಳಲ್ಲಿ ಭಾಗಿಯಾಗಿದ್ದಳು. ಶೇಖರನ ಮನಸ್ಸು ಯಾವುದನ್ನೂ ಲಕ್ಷಿಸದೆ ತರಂಗ ಮಧ್ಯದಲ್ಲಿ ಸಿಕ್ಕಿದ ದೋಣಿ ಯಂತೆ ಅಲೆದಾಡುತ್ತಿತ್ತು. ತನ್ನಿಂದಾಗಿ ಸಾಧ್ವಿಯಾದ ಸುಜಲೆಯು ಮಾತಾಪಿತೃಗಳನ್ನೂ ಬಂಧುಬಾಂಧವರನ್ನೂ ಕಳೆದುಕೊಂಡಳೆಂದು ಆತನು ಅತ್ಯಂತ ಕಾತರಹೊಂದಿದ್ದನು. ಆದರೆ ಪ್ರಯೋಜನವೇನು? ವಿವಾಹವು ಎಂದೋ ನಡೆದು ಹೋಗಿದೆ. ಅಲ್ಲದೆ ಸುಜಲೆಯ ಪ್ರೇಮ ವಾದರೂ ದೈವಿಕವಾಗಿತ್ತು. ಪ್ರೇಮದ ನೆಲೆಯನ್ನೂ ಗೂಢವನ್ನೂ ಶೇಖರನು ಚೆನ್ನಾಗಿ ಅರಿತಿದ್ದನು. ಆತನು ಚಿಂತಿಸಿ ಚಿಂತಿಸಿ ಬೇಸತ್ತನು. ಕೆಲವೇ ದಿನಗಳಲ್ಲಿ ಮದ್ರಾಸಿಗೆ ಹೋಗಲಿಕ್ಕಿದೆ. ಪತ್ನಿಯನ್ನು ಬಿಟ್ಟು ಹೋಗಲು ಮನಸ್ಸಿಲ್ಲ. ಬಿಟ್ಟುಹೋಗದೆ ನಿರ್ವಾಹವಿಲ್ಲ. ಮನಸ್ಸಿನಲ್ಲಿ ಅತ್ಯಂತ ಕ್ಲೇಶಹೊಂದಿದನು. ಚಕ್ಷುಗಳಿಂದ ನೀರಬಿಂದುಗಳೆರಡು ಹೊರಳಿ ಸುಜಲೆಯ ಕೈಯಮೇಲೆ ಬಿದ್ದವು. ಸುಜಲೆಯು ಕಾತರೆಯಾ ದಳು. ಆಕೆಯು ಮೊಗವೆತ್ತಿ ಮೇಲಕ್ಕೆ ನೋಡಲು ಶೇಖರನು ಮೌನ ವಾಗಿ ರೋಧಿಸುತ್ತಿದ್ದನು. ಸುಜಲೆಯು ಆತನನ್ನು ಎಷ್ಟು ಸಂತೈಸಿದರೂ ಆತನು ಸಮಾಧಾನಹೊಂದಲಿಲ್ಲ. ಆತನ ದುಃಖವು ಇಮ್ಮಡಿಹೊಂದಿತು. ಸುಜಲೆಯು ಆತನ ಕಣ್ಣೀರನ್ನೊರಸಿ ಪ್ರಿಯಕರಾ! ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ, ನೀವು ಮಾಡುವುದಾದರೂ ಏನಿನ್ನು? ಮಾಡಿ ಮುಗಿಸಿದ ಕೆಲಸವನ್ನೂ ಆಡಿ ಮುಗಿಸಿದ ಮಾತನ್ನೂ ಹಿಂದಕ್ಕೆ ತೆಗೆದು ಕೊಳ್ಳುವುದೆಂದರೆ ಗಾಳಿಯಲ್ಲಿಬರೆವ ಅಕ್ಷರಗಳಂತೆಯೇ ಸರಿ.ಆದುದರಿಂದ ವೃಥಾ ಪ್ರಲಾಪಿಸಬೇಡಿರಿ. ಆದರೆ ನನ್ನಿಂದೇನಾಗರೂ ಅಪರಾಧವಾಗಿದ್ದರೆ

ಅದನ್ನು ಮನಃಪೂರ್ವಕವಾಗಿ ಕ್ಷಮಿಸಿರಿ. ನಿಮ್ಮ ದುಃಖದ ಕಾರಣವನ್ನು ನನ್ನಲ್ಲಿ ಮರೆಮಾಚುವುದಾದರೂ ಆವ ಉದ್ದೇಶದಿಂದ?

ಶೇಖರ—ಸುಜಲಾ! ನಿನ್ನ ದಿಟ್ಟತನವನ್ನು ನಾನು ಏನೆಂದು ಹೇಳಲಿ! ನಿನ್ನ ಸ್ವಾರ್ಥತ್ಯಾಗವು ಎಂಥವನ ಮನಸ್ಸನ್ನಾದರೂ ಕರಗಿಸದಿರದು. ಆದರೆ, ನಿನ್ನ ಕಠಿಣ ಹೃದಯದ ತಂದೆಯು ನಿನ್ನನ್ನು ಸಂಪೂರ್ಣವಾಗಿ ತ್ಯಜಿಸಿಬಿಟ್ಟನಲ್ಲವೇ? ನಿನ್ನ ಸಂಬಂಧವನ್ನೇ ಕಡಿದುಕೊಂಡನಲ್ಲವೇ? ಯಾತಕ್ಕೆಂದು ನೀನು ತಿಳಿದಿರುವೆಯಾ? ನೀನು ನನ್ನನ್ನು ವರಿಸಿದುದರಿಂದ, ಈ ಅನರ್ಥಕ್ಕೊಳಗಾಗಿರುವೆ. ನಿನ್ನ ಜಾತಿಯ ಅನುರೂಪ ಪತಿಯನ್ನು ವರಿಸಿ ಸುಖವಾಗಿರಬಾರದಿತ್ತೆ?

ಸುಜಲೆ—ಪ್ರಿಯತಮಾ ಸುಮ್ಮನಿರಿರಿ. ಅದಕ್ಕೆಲ್ಲಾ ಅಂಜುವವಳು ನಾನೆಂದು ತಿಳಿದಿರುವಿರಾ? ಆದದ್ದು ಆಗಿಹೋಯಿತು. ಇನ್ನು ಮುಂದಿನ ಮಾತು. ನಿಮ್ಮ ಜೀವನದ ಗುರಿಯಾವುದು? ನನ್ನಿಂದಾಗಿ ನಿಮಗೆ ಎಷ್ಟೊಂದು ಕರಕರೆ ಪ್ರಿಯಾ? ಆದರೆ ಅದು ನನ್ನಿಂದೆಂದು ನೀವು ಭಾವಿಸಲಾರಿರಿ. ನೀವು ಬಿ. ಎಲ್.,ಗೆ ಹೋಗುವುದಿಲ್ಲವೇ? ನಾನು ನೀವಿಲ್ಲದೆ ಹೇಗೆ ದಿನಗಳನ್ನು ದೂಡಲಿ? ನೀವಿಲ್ಲದಿದ್ದರೆ, ನಾನು ಅತ್ಯಂತ ದುಃಖಕ್ಕೊಳಗಾಗಲಾರೆನೇ?

ಪದ್ಮ—ಪ್ರಿಯೆ! ಬಿ. ಯಲ್.ನ್ನು ಪೂರ್ಣಮಾಡಬೇಕೆಂದು ನನಗೆ ಅತ್ಯಂತ ಆಶೆಯಿರುವುದು. ನನ್ನ ಜೀವನದ ಗುರಿಯೂ ಅದೇ ಆಗಿದೆ. ಆದರೆ, ನಿನ್ನ ಒಪ್ಪಿಗೆಯನ್ನು ತೆಗೆದುಕೊಳ್ಳದೆ ಯಾವ ಕಾರ್ಯವನ್ನೂ ಕೈಗೊಳ್ಳಬಾರದೆಂದು ಹಿಂಜರಿದಿರುವೆನು.

ಸುಜಲೆ—ಪ್ರಾಣೇಶಾ! ಅಗತ್ಯವಾಗಿಯೂ ನೀವು ಬಿ. ಎಲ್.ಗೆ ಹೋಗಿರಿ. ಅದನ್ನು ನಾನು ತಡೆಯುವೆನೆ? ಆದರೆ ನಿಮ್ಮನ್ನು ಅಗಲಿರಲು ನನ್ನ ಮನಸ್ಸೊಪ್ಪುವುದಿಲ್ಲ. ಆದರೂ ನಿರ್ವಾಹವಿಲ್ಲ. ನಿಮ್ಮ ಅಭ್ಯುದಯಕ್ಕೆ ನಾನು ಎಂದೂ ಅಡ್ಡಿಯನ್ನು ತರಲಾರೆ. ನೀವು ಎಂದು ಹೊರಡಲಿರುವಿರಿ?

ಪದ್ಮ—ನಾನು ಇನ್ನೂ ಆಲೋಚಿಸಿಲ್ಲ. ಆದರೆ ಹದಿನೈದು ದಿನಗಳೊಳಗೆ ಹೋಗಲೇಬೇಕು. ನಿನ್ನ ವಿಷಯದಲ್ಲಿ ನನಗೆ ಅತ್ಯಂತ ವ್ಯಸನ

ವಿರುವುದು. ಆದರೆ, ನನ್ನ ಮಾತೆಯವರೊಂದಿಗಿರಲು ನಿನಗೆ ಯಾವ ತರದ ಬೇನೆ ಬೇಸರಿಕೆಗಳಿಲ್ಲ. ಅವರು ಮಗಳಿಗಿಂತಲೂ ಹೆಚ್ಚಾಗಿ ನಿನ್ನನ್ನು ಪ್ರೀತಿಸುವರು. ಅವರೊಂದಿಗೆ ಸಹಕರಿಸಿ ಇರು. ನಾನು ಇನ್ನೇನು ಹೇಳಲಿ?

ಸುಜಲೆ—ನಿಮ್ಮ ಪ್ರಯಾಣವು ಅತ್ಯಂತ ಸುಖಕರವಾಗಲಿ, ನಿಮ್ಮ ಕಾರ್ಯದಲ್ಲಿ ನೀವು ಜಯಹೊಂದಿರಿ.

ಪದ್ಮ—ಸುಜಲೆ! ಯಾವ ತರದಲ್ಲಿಯೂ ಮನಸ್ಸಿನಲ್ಲಿ ಅಸಮಾಧಾನ ಪಡದೆ ಇರು. ವೃಥಾ ನನ್ನನ್ನು ಚಿಂತಿಸಿ, ಚಿಂತಿಸಿ ಕೃಶಳಾಗಬೇಡ.

ಸುಜಲೆ—ಮತ್ತೂ ನಿಮಗೆ ಸಂಶಯವೇಕೆ? ನಾನು ನಿಮ್ಮ ವಚನವನ್ನು ಶಿರಸಾವಹಿಸಿರುವೆನು.

ಹದಿನೈದು ದಿವಸಗಳು ಬಹು ಬೇಗನೆ ಸಮುದ್ರಗರ್ಭದಲ್ಲಿ ಅಡಗಿ ಹೋದುವು. ಇಂದೇ ಪದ್ಮಶೇಖರನು ಮದ್ರಾಸಿಗೆ ಪ್ರಯಾಣಮಾಡಲಿರುವನು. ಮಾತೆಯೂ ಸತಿಯೂ ಆತನ ಪ್ರಯಾಣಕ್ಕೆ ಸಕಲ ಸಲಕರಣೆಗಳನ್ನು ಒದಗಿಸತೊಡಗಿದರು. ಯಾವತ್ತೂ ಸಿದ್ಧವಾಯಿತು. ಹೊರಡುವುದೊಂದೇ ಬಾಕಿ ಉಳಿಯಿತು. ಸುಜಲೆಯು ಶೇಖರನನ್ನು ಅತ್ಯಂತ ಪ್ರೀತಿಯಿಂದ ಆಲಿಂಗಿಸಿದಳು. ಶೇಖರನೂ ಪ್ರತಿಯಾಗಿ ಆಕೆಯನ್ನು ಪ್ರೇಮದಿಂದ ಚುಂಬಿಸಿದನು. ಮಾತೆಯು ಮಗನನ್ನು ಆಶೀರ್ವದಿಸಿ ಬುದ್ಧಿಮಾರ್ಗವನ್ನು ಹೇಳಿ ಬೀಳ್ಕೊಟ್ಟಳು. ಶೇಖರನು ಹೊರಟು ಹೋದನು.

○○ ○○ ○○

"ಹಾ ಪ್ರಿಯಾ, ಪ್ರಶಾಂತ ಹೃದಯಾ, ಹಾನಿಪೊಂದಿದೆಯಾ! ಪ್ರಿಯಾ— — — —"

"ಅರಸಿಯಳನು ಮರೆತು ಹೀಗೆ ತೊರೆದು ಪೋಗುವರೇ ಪ್ರಿಯಾ — — — — —"

ಸುಜಲೆಯು ಗಾಯನದಲ್ಲಿಯೇ ತಲ್ಲೀನಳಾಗಿದ್ದಳು. ಕೋಮಲ ಕಂಠದಿಂದ ಹೊರಟ ಮೃದುವಾಣಿಯು ಗಾಳಿಯಲ್ಲಿ ಲೀನವಾಗುತ್ತಿತ್ತು. ಸ್ವರವು ಮೃದುಮಧುರವಾಗಿ ಹೊರಟು ಬಹಳ ಕರುಣಾಜನಕವಾಗಿತು.

ಮೆಲ್ಲನೆ ಸದ್ದಾಯಿತು; ಸುಜಲೆಯು ಹಾಡುತ್ತಲೇ ಇದ್ದಳು. "ಮಗೂ! ಊಟಕ್ಕೇಳಬಾರದೇ? ಹೊತ್ತು ಮೀರಿ ಹೋಗುತ್ತಿದೆಯಲ್ಲಾ? ಊಟವನ್ನು ತೀರಿಸಿ ಬೇಕಾದಷ್ಟು ಹೊತ್ತು ಇಲ್ಲಿ ಕಾಲವನ್ನು ಕಳೆಯಬಹುದಲ್ಲವೇ?

ಸುಜಲೆ—ಅತ್ತೆಯವರೇ! ಇಂದೇನೋ ನನಗೆ ಊಟವೇ ಬೇಡವೆಂದು ತೋರುತ್ತದೆ. ಹಸಿವೆಯೇ ಇಲ್ಲ. ನೀವು ಹೋಗಿ ಊಟಮಾಡಿರಿ.

ಅತ್ತೆ—ಮಗೂ! ಸ್ವಲ್ಪವಾದರೂ ತೆಗೆದುಕೊಳ್ಳಬಾರದೇ? ಏಳು, ಹೋಗೋಣ.

ಇಬ್ಬರೂ ಊಟಕ್ಕೆ ಹೊರಡುವರು.

ಸುಜಲೆ—ಅಮ್ಮಾ! ಇಂದೇನೋ ನನ್ನ ಮನಸ್ಸು ವ್ಯಸನಗೊಂಡಿರುವುದು. ಮದ್ರಾಸಿನಿಂದ ಕಾಗದವೇಕೆ ಇನ್ನೂ ಬಂದಿಲ್ಲ? ಅವರು ಈ ಸಲ ಊರಿಗೆ ಬರುವರಲ್ಲವೇ?

ಅತ್ತೆ—ಸುಜಲಾ! ಅವನ ಕಾಗದವು ಬಂದೇ ಇದೆಯಲ್ಲವೇ? ಅದನ್ನು ನಿನಗೆ ತೋರಿಸಲು ಮರೆತೇ ಬಿಟ್ಟಿರುವೆನು. ಅವನು ಇನ್ನು ಇಪ್ಪತ್ತು ದಿವಸಗಳಲ್ಲಿಯೇ ಬರುವನು.

ಸುಜಲೆ–ಸಂತೋಷವಮ್ಮಾ! ಅವರನ್ನು ನೋಡದೆ ನನ್ನ ಮನಸ್ಸು ಹೇಗೋ ಹೇಗೋ ಆಗಿದೆ. ಬೇಗನೆ ಬರುವರಲ್ಲವೇ?

ಅತ್ತೆ—ಹೌದು ಮಗೂ! ಬೇಗನೆ ಬರುವನು. ನೋಡು, ನಿನ್ನ ತಂಗಿಗೆ ಬರುವ ವಾರದಲ್ಲಿ ವಿವಾಹವಾಗುವುದಂತೆ. ಎಷ್ಟೊಂದು ಸಂಭ್ರಮದಿಂದ ನಡೆಯಲಿಕ್ಕಿದೆ! ನೀನೂ ಹೋಗುವುದಿಲ್ಲವೇನಮ್ಮಾ?

ಸುಜಲೆ– ಹೌದಮ್ಮಾ! ನಾನು ಬರಬೇಕೆಂದು ತಂಗಿಯು ಆಗ್ರಹಪೂರ್ವಕವಾಗಿ ಹೇಳಿ ಕಳುಹಿಸಿರುವಳು. ಅವರೂ ಬರುವಂತೆ ಹೇಳಿರುತ್ತಾಳೆ. ಆದರೆ, ಅವರು ಮದ್ರಾಸಿನಲ್ಲಿರುವುದರಿಂದ ಬರುವುದು ಅಸಂಭವನೀಯ. ನಾನಾದರೋ ಆ ಸ್ಮಶಾನ ಭೂಮಿಯಂತಿರುವ ಮನೆಯನ್ನು ಹೇಗೆ ಪ್ರವೇಶಿಸಲಿ! ರಾಕ್ಷಸೀ ಹೃದಯದ ನನ್ನ ಮಾತಾಪಿತೃಗಳನ್ನು ಹೇಗೆ ಕಾಣಲಿ!

ಅತ್ತೆ–ಅದು ಹೇಗಾಗುವುದು ಸುಜಲಾ? ಹೇಳಿ ಕಳುಹಿಸಿದ ಮೇಲೆ ಹೋಗದಿರುವುದೇ?

ಸುಜಲೆ—ಹೋಗುವೆನಮ್ಮಾ? ನನ್ನ ಪ್ರೀತಿಯ ಏಕಮಾತ್ರ ತಂಗಿಯ ಮಾತನ್ನು ಈ ಸಂದರ್ಭದಲ್ಲಿ ತೆಗೆದುಹಾಕುವುದೇ? ಹೋಗಿ ಒಂದೇ ದಿವಸದಲ್ಲಿ ಹಿಂತಿರುಗಿ ಬರುವೆನು. ನಿಮ್ಮ ಇಷ್ಟವೇನಮ್ಮ!

ಅತ್ತೆ—ಸುಖವಾಗಿ ಹೋಗಿ ಬಾರಮ್ಮಾ. ಎರಡು ಮೂರು ದಿವಸ ಕುಳಿತು ನಂತರ ಹಿಂತಿರುಗಿ ಬಂದುಬಿಡು. ಹೋದನಂತರ ಒಂದೇ ದಿವಸ ದಲ್ಲಿ ಹಿಂದಿರುಗುವುದು ತರವಲ್ಲ.

oo oo oo oo

ಇಂದು ರಾಮರಾಯರಲ್ಲಿ ಮದುವೆ; ಮದುವೆಯೆಂದರೆ ವಿಶೇಷ ರೀತಿಯ ಮದುವೆ. ರಾಯರು ಶ್ರೀಮಂತರೂ ಹೆಚ್ಚಿನವರಿಗೆ ಬೇಕಾಗಿದ್ದ ವರೂ ಆಗಿದ್ದ ಕಾರಣ ದೂರದೂರದಿಂದ ಅವರ ಆಪ್ತರೂ, ಬಂಧುಗಳೂ ಬಂದಿದ್ದರು. ವಿವಾಹ ಮಂಟಪವು ಜನಸ್ತೋಮದಿಂದ ಕಿಕ್ಕಿರಿದಿತ್ತು. ಇಂದೇ ಸುಖಲತೆಯು ಗೃಹಿಣಿಯಾಗುವಳು. ವರನು ಬೆಂಗಳೂರಿನ ಪ್ರಸಿದ್ಧ ಎಡ್ವೊಕೇಟ್ ಉಮಾಕಾಂತರ ಮಗನು. ಶಾಸ್ತ್ರೋಕ್ತವಾಗಿ ಮಂಗಲಕಾರ್ಯವು ವಿಶೇಷ ರೀತಿಯ ವಿಜೃಂಭಣೆಯಿಂದ ಜರಗಿತು. ಸುಜಲೆಯೂ ತಂಗಿಯ ಮದುವೆ ಸಮಾರಂಭದಲ್ಲಿ ಪಾಲುಗಾರ್ತಿಯಾಗಿ ದ್ದಾಳೆ. ಅವಳ ತಂದೆಗೆ ಅವಳ ಸಂದರ್ಶನವು ಸಹನೀಯವಾಗದೆ ಇದ್ದರೂ ಅಂದು ಮಂಗಲಕಾರ್ಯವಲ್ಲವೇ? ಆದುದರಿಂದ ಸುಮ್ಮಗಿದ್ದರು.

oo oo oo oo

ಒಂದು ದಿನ ಮಧ್ಯಾಹ್ನ ಸುಜಲೆಯೂ, ಸುಖಲತೆಯೂ ಊಟ ವನ್ನು ತೀರಿಸಿ, ಹಜಾರದಲ್ಲಿ ವಿಶ್ರಮಿಸಿದ್ದರು. ಆಗಲೇ ಬಂದಿದ್ದ 'ಹಿಂದೂ' ದೈನಿಕ ಪತ್ರಿಕೆಯು ಎದುರಿಗಿದ್ದ ಮೇಜಿನ ಮೇಲೆ ಬಿದ್ದಿತ್ತು. ಸುಜಲೆಯು ಅದನ್ನು ಬಿಡಿಸಿ ಓದ ಹತ್ತಿದಳು. ಮದ್ರಾಸಿನ ವರ್ತಮಾನದ ಪುಟವನ್ನು ತಿರುಗಿಸ ತೊಡಗಿದಳು. ಅದರಲ್ಲೊಂದು ಕಡೆಯಲ್ಲಿ ಹೀಗಿತ್ತು. "ಇಂದು ಪ್ರಾತಃಕಾಲ ಪುಷ್ಕರಿಣಿಯಲ್ಲಿ ಈಜಾಡಲು ಹೋಗಿದ್ದ ಐದು ಮಂದಿ ದುರದೃಷ್ಟದಿಂದ ಮುಳುಗಿ ನೀರುಪಾಲಾದರು. ಐದು ಮಂದಿಯೂ ಇಲ್ಲಿಯ ಲಾ ಕಾಲೇಜಿನ ವಿದ್ಯಾರ್ಥಿಗಳು ಅವರ ಹೆಸರನ್ನು ಈ ಕೆಳಗೆ ಕೊಡಲಾಗಿದೆ." ಸುಜಲೆಯ ತಲೆಯು ಸಿಡಿಯ ಹತ್ತಿತು. ಮೈಯಲ್ಲಿ ಬೆವ

ರಿಳಿಯುತೊಡಗಿತು. ಅವಳು ತನ್ನಷ್ಟಕ್ಕೆ ತಾನೇ ನಡುಗಹತ್ತಿದಳು. ಆದರೂ ಅವಸರವಸರವಾಗಿ ಹೆಸರುಗಳನ್ನು ಓದತೊಡಗಿದಳು. ಕಣ್ಣಿನಲ್ಲಿ ಮಬ್ಬು ಕವಿದಂತಾಯಿತು. ಆದರೂ ಪ್ರಯತ್ನಪೂರ್ವಕವಾಗಿ ಮೊದಲನೆಯ ಮೂರು ಹೆಸರುಗಳನ್ನು ಓದಿದಳು ನಾಲ್ಕನೆಯ ಹೆಸರು.......... ಆಕೆಯ ಪ್ರಿಯತಮನದು. ಸುಜಲೆಗೆ ಕಣ್ಣು ಕತ್ತಲೆ ಬಂತು. ಮತ್ತೊಮ್ಮೆ ಅದನ್ನು ನೋಡಲಿಕ್ಕೂ ಆಕೆಗೆ ಧೈರ್ಯಬಾರದು. ಆದರೂ ಇನ್ನೊಮ್ಮೆ ನೋಡಿದಳು. ನಿಜವಾಗಿಯೂ ಅದೇ ಹೆಸರು. ಸುಜಲೆಯು ಬುಡಕಡಿದ ಬಾಳೆಯಂತೆ ದೊಪ್ಪನೆ ನೆಲಕ್ಕೆ ಬಿದ್ದುಬಿಟ್ಟಳು. ಸುಖಲತೆಯು ಭಯಗೊಂಡು ಬೊಬ್ಬೆ ಹಾಕಿದಳು. ಮನೆಯವರೆಲ್ಲರೂ ಓಡಿಬಂದರು. ಕ್ಷಣದಲ್ಲಿಯೇ ಆಕೆಯನ್ನು ಎತ್ತಿಹಿಡಿದು ಮುಖಕ್ಕೆ ನೀರು ಚಿಮುಕಿಸಿದರು. ಆದರೆ ಸುಜಲೆಯ ದೇಹವು ಅಚೇತನ....ಪ್ರಾಣಪಕ್ಷಿಯು ಪ್ರಿಯತಮನನ್ನು ಸೇರಲು ಎಂದೋ ಹಾರಿಹೋಗಿತ್ತು.

ರಾಯರ ಮನೆಯಲ್ಲಿ ಜೊಬ್ಬೆ, ಕೂಗಾಟ, ರಂಪಾಟಗಳಿಗೆ ಮೊದಲಾಯಿತು. ಫಲವೇನು? ಸುಜಲೆಯ ತಂದೆಯು ಕಾರಣವನ್ನು ಕೂಡಲೇ ತಿಳಿದರು. ಅವರಿಗೆ ಪದ್ಮಶೇಖರನ ಮರಣ ವೃತ್ತಾಂತವು ಸಂತೋಷವನ್ನೇ ಉಂಟುಮಾಡಿತು. ಆದರೆ ಮಗಳ ಈ ರೀತಿಯ ಮರಣವು ಕಣ್ಣಿಗೆ ಕಟ್ಟಿದಂತಾಗಲು, ಅವರು ಚಿಕ್ಕ ಮಗುವಿನಂತೆ ರೋದಿಸತೊಡಗಿದರು. ಮಗಳ ದಾರುಣವಾದ ಸ್ಥಿತಿಯನ್ನು. ನೆನೆನೆನೆದು ದುಃಖಿಸುವುದೇ ತಂದೆ ತಾಯಿಗಳ ದಿನನಿತ್ಯದ ಕೆಲಸವಾಯಿತು. ಸುದ್ದಿಯು ಊರಲ್ಲೆಲ್ಲಾ ಹಬ್ಬಿತು. ಒಬ್ಬೊಬ್ಬರು ಒಂದೊಂದು ರೀತಿಯಾಗಿ ಟೀಕಿಸಲಾರಂಭಿಸಿದರು. ಅಂತರ್ಜಾತಿಯುವನನ್ನು ಮದುವೆಯಾದ ದ್ವೇಷದಿಂದ ರಾಯರೇ ಮಗಳನ್ನು ದ್ವೇಷಿಸಿ ಅವಳ ಈ ರೀತಿಯ ಕೊಲೆಗೆ ಕಾರಣರೆಂದು ಅನೇಕರು ಭಾವಿಸಿದರು. ಕೆಲವರು ಸಾಧ್ವಿಯಾದ ಸುಜಲೆಯ ಗುಣರಾಶಿಯನ್ನೂ ಸೌಜನ್ಯವನ್ನೂ ಬಣ್ಣಿಸಿ, ಆಕೆಯ ದುರ್ಮರಣಕ್ಕೆ ವ್ಯಥೆಪಟ್ಟರು

SANJIVA B, TONSE.

---

# ೪. ಸಂಧಾನದಲ್ಲಿ ಕಾಳಗ!

—— § ——

"ಹಿಂದೀಯರು ಫಿರಂಗಿಗೆ ಎದೆಕೊಡಲು ತಯಾರಾಗಬೇಕು." ಎಂದು ನಾನು ಭಾಷಣ ಕೊಟ್ಟಿರುವುದನ್ನು ನಿಮ್ಮಲ್ಲಿ ಕೆಲವರಾದರೂ ಕೇಳಿರಬಹುದು. (ಕೇಳಿಲ್ಲದಿದ್ದರೆ ಅದು ನನ್ನ ತಪ್ಪಲ್ಲ; ನಾನು ಹೇಳಿರುವದಂತೂ ಖಂಡಿತ.) ಆದರೆ ಮನೆಯ ಹಿಂಬದಿಯ ಗುಡ್ಡದಲ್ಲಿ ನರಿಯೊಂದು ಕೂಗಿತೆಂದರೆ ನಾನೂ ಹಾಗೆಯೇ ಕೂಗಿಬಿಡುತ್ತಿದ್ದೆನು, ಹೆದರಿಕೆಯಿಂದ. ಹೀಗೆಂದ ಮಾತ್ರಕ್ಕೆ ನನ್ನನ್ನು ಹೇಡಿಯೆಂದು ತಿಳಿಯಬೇಡಿರಿ; ಹಿಂದೊಬ್ಬ ಪ್ರತಾಪಶಾಲಿ ಸೈನ್ಯಾಧಿಪತಿ (ಹೆಸರು ನೆನಪಿಲ್ಲ)ಗೆ ಕರಿಬೆಕ್ಕನ್ನು ಕಂಡೊಡನೆಯೇ ನಡುಗುವ ಸ್ವಭಾವವಿತ್ತಂತೆ. ಆತನು ಮಗುವಿದ್ದಾಗ ತಾಯಿ, ಕರಿಬೆಕ್ಕನ್ನು ಹತ್ತಿರ ಹಿಡಿದು ಹೆದರಿಸಿದುದೇ ಇದಕ್ಕೆ ಕಾರಣ. ನನ್ನನ್ನು ಆತನ ಅವತಾರವೆಂದು ಬೇಕಾದರೆ ಭಾವಿಸಿಕೊಳ್ಳಿ. ನಾನೂ ಒಂದು ಕಾಲದಲ್ಲಿ ಮಗುವಾಗಿದ್ದೆನಂತೆ–ಕತ್ತಲಲ್ಲಿ ನನ್ನನ್ನು ಮಲಗಿಸಿ ತಾಯಿ ಹೊರಗೆ ಹೋಗಿದ್ದಳಂತೆ– ಆಗ ಗೂಡಿನ ಕೋಳಿ ಹಿಡಿಯಲಿಕ್ಕೆಂದು ಬಂದ ನರಿಯು, ಹೆದರಿಸುವ ಮನುಷ್ಯರಿಲ್ಲದಿದ್ದುದರಿಂದ ಹಿಗ್ಗಿ ಕೂಗಿಬಿಟ್ಟಿತಂತೆ- ಆಗಲೇ ನನ್ನ ಕರುಳಿಗೆ ಹಿಡಿಯಿತು ನರಿಯ ಕೂಗಿನ ಹೆದರಿಕೆ. ಮೊನ್ನೆಯ ವರೆಗೂ ಹಿಡಿದೇ ಇತ್ತು. ಮೊನ್ನೆ ನಾನೂ ತೋಮನೂ ಮಾತಾಡುತ್ತಿದ್ದಾಗ ಈ ಪ್ರಸಂಗ ಬಂತು. ಅವ ಹೇಳಿದ "ಒಂದು ದಿನ ನರಿಗಳು ಹಿಂಡಾಗಿ ಕೂಗುವಾಗ ಮನಸ್ಸು ಗಟ್ಟಿಮಾಡಿ ಸರಿಯಾಗಿ ಕೇಳಿಬಿಡು; ಆಗ ಹೆದರಿಕೆಯೆಲ್ಲಾ ಬಿಟ್ಟುಹೋಗುತ್ತದೆ" ಎಂದು. ನನಗೆ ನಗು ಬಂತು. "ಸರಿ, ಸರಿ ಪ್ರಾಣವೇ ಬಿಟ್ಟುಹೋಗುವಾಗ ಹೆದರಿಕೆಯೊಂದು ನಿಲ್ಲುತ್ತದೇನು?" ಎಂದೆ. ತೋಮ ಒಳ್ಳೇ ಉಪಾಯಗಾರ. "ನಾಳೆಯ ತಾಳಮದ್ದಲೆಗೆ ಬಂದರೆ ನಿನ್ನ ಹೆದರಿಕೆಯನ್ನೆಲ್ಲಾ ಓಡಿಸಿಬಿಡುತ್ತೇನೆ" ಎಂದ. "ನಿನ್ನ ಬುದ್ಧಿವಂತಿಕೆ ಸಾಕು. ರಸ್ತೆಯಿಂದಲೇ ಹೋಗುವು

ದಾದರೆ ಬರುತ್ತೇನೆ. ಗುಡ್ಡೆಯಲ್ಲಿ ಕೊಂಡುಹೋಗುವ ಯೋಚನೆಯೆಂದು ತೋರುತ್ತದೆ" ಎಂದು ನಾನು ಹಲ್ಲುಬಿಟ್ಟೆ. "ನೀನು ಹೇಳಿದ ಹಾದಿಯಲ್ಲೇ ಹೋಗೋಣ. ತಾಳಮದ್ದಲೆಗೆ ಬರುವಿಯಷ್ಟೆ?" ಎಂದ ತೋಮ. ನಾನು ಒಪ್ಪಿದೆ.

ತಾಳಮದ್ದಲೆಗೆ ಹೋಗಿ ಎಲ್ಲರೊಟ್ಟಿಗೆ ನಾವೂ ಕುಳಿತೆವು. ನಾನು ತಾಳಮದ್ದಳೆಯನ್ನು ಕಂಡುದು ಇದೇ ಮೊದಲು (ಬಹುಶ: ಕೊನೆಯೂ ಇದೇ) ಯಾರು, ಎಲ್ಲಿಂದ ಬಂದು ಹೇಗೆ ಆರಂಭಿಸುವರೋ ಎಂದು ನಾನು ಅತ್ತಿತ್ತ ನೋಡುತ್ತಿದ್ದೆ. ಅಷ್ಟರಲ್ಲಿ ನಮ್ಮ ಮಧ್ಯದಲ್ಲಿ ಕುಳಿತವನೊಬ್ಬನು ಚಂಡೆಯನ್ನೆಳೆದು ಲಟಪಟ ಹೊಡೆಯತೊಡಗಿದ; ಇನ್ನೊಬ್ಬ ಮದ್ದಲೆ ಹೊಡೆದ; ಮತ್ತೊಬ್ಬ ಜಾಗಂಟೆ ಬಡಿಯುತ್ತಾ ಸುರುಮಾಡಿದ— ಗಜ ಮೂಖಾ|(ೞ=?)ದವಗೇ | ಗ-ಣ-ಪ-ಗೇ | ಹೋ೯೯ || ಕೊನೆಯ ಆಲಾಪನೆಯನ್ನು ಕೇಳುತ್ತಿದ್ದಂತೆ ನನ್ನ ಹುಟ್ಟುಗುಣವು ಪ್ರಕಾಶಕ್ಕೆ ಬಂತು! ಆಗಲೇ ತೋಮನ ಉಪಾಯವೂ ಮನಸ್ಸಿಗೆ ಹೊಳೆಯಿತು. ನನ್ನ ದುರಭ್ಯಾಸವನ್ನು ತೊಲಗಿಸಲು ಇದೇ ಸುಸಂದರ್ಭವೆಂದು ಎದೆ ಗಟ್ಟಿಮಾಡಿ ಕುಳಿತುಕೊಂಡೆ. ಭಾಗವತರ ಸಭಾಲಕ್ಷಣ ಮುಗಿಯಿತು. ಅವರು ನಿಧಾನವಾಗಿ ಜಾಗಂಟೆ ಕೋಲನ್ನು ಕೆಳಗಿಟ್ಟು, ಶರ್ಟನ್ನೂ ಕವಚಿಹಾಕಿ, ಗಾಳಿ ಹಾಕಿಕೊಳ್ಳತೊಡಗಿದರು. (ನನಗೆ ಚಳಿ ಹಿಡಿದಿತ್ತು) ಪ್ರಸಂಗ ಯಾವುದು? ಎಂದು ಭಾಗವತರ ಪ್ರಶ್ನೆ. ಸಂಧಾನವಾಗಲಿ (ಇಟಲಿ-ಅಬಿಸೀನಿಯಕ್ಕಲ್ಲ.) ಶ್ರೀಧರ ಶೆಟ್ರ ಕೃಷ್ಣ; ಸಂಕಪ್ಪಶೆಟ್ರ ಕೌರವ" ಎಂದು ದೂರದಿಂದ ಕೇಳಿಬಂತು. (ಮೊದಲು ಇದ್ದ "ಅಶರೀರವಾಣಿ"ಯ ಪಾರ್ಟು ಇದಾಗಿರಬೇಕು) ಭಾಗವತರು ಪುನಃ ಜಾಗಂಟೆ, ಎತ್ತಿ ಸುರುಮಾಡಿದರು- "ಪೊರೆಗೈಹರಿನ್ನು ಸಂ|ಗರ.................. ಕುರುರಾಯನಿರಲೂ| ಓ-ಓೀ|| ಭಾಗವತರು ಕೊನೆಯ ರಾಗವನ್ನು ಸಾಕಷ್ಟು ಎಳೆದು ನಿಲ್ಲಿಸಿದರೋ ಇಲ್ಲವೋ-ಅಷ್ಟರಲ್ಲಿ ಸಭೆಯ ಮಧ್ಯದಲ್ಲಿ 'ಖೇ-ಹೊ' ಎಂಬ ಕೂಗೊಂದು ಎದ್ದಿತು; ನಾನು ಬೆಚ್ಚಿಬಿದ್ದು ಒಂದು ಗೇಣಾದರೂ ಮೇಲೆ ಹಾರಿ ಕೆಳಗಿಳಿದಿರಬೇಕು. ಆಗ ನನ್ನ ಎದೆಯು ನರಿಯ ಕೂಗನ್ನು ತಡೆದುಕೊಳ್ಳುವಷ್ಟು ತರಬೇತಿಯಾಗಿತ್ತು. ಆಗಲೇ ಸಿಂಹ ಘರ್ಜನೆಯನ್ನು ತಡೆದು

ಕೊಳ್ಳಬೇಕೆಂದರೆ? ನರಿಯಿದ್ದಲ್ಲಿ ಹುಲಿ, ಸಿಂಹ ಇರಲೂ ಬಹುದು ಎಂಬ ಪ್ರಕೃತಿ ನಿಯಮವನ್ನು ಮರೆತು ನಾನು ಸಿಕ್ಕಿಬಿದ್ದೆ! ಹೇಗೂ ಪುನಃ ಗಟ್ಟಿ ಕುಳಿತು ಬಿಟ್ಟೆ. ಭಾಗವತರು 'ಪರಾಕ್ರಮ ಕಂಠೀರವ' ಎಂದರು. ಮನಸ್ಸಿನಲ್ಲಿ 'ಈ ಬಿರುದು ನನಗೇ ಯೋಗ್ಯ' ಎಂದುಕೊಂಡೆ. ಅದು ನನಗಲ್ಲ. ಆ ಘರ್ಜನೆಯ ದಾಟಿಯಲ್ಲಿಯೇ 'ಭಣ್ಣಿರಯ್ಯಾ'ಎಂದರು ಸಂಕಪ್ಪ ಶೇಟ್ರೇ ಪುನಃ. ಮಿಕ್ಕವರೆಲ್ಲರೂ 'ಕಂಠನೀರವ' ಮಾಡಿ ಕುಳಿತಿರುವಾಗ, ಇವರೊಬ್ಬರು ಕಂಠದಿಂದ ಕರುಳಿನ ವರೆಗಿನ ಶಬ್ದವನ್ನೆಲ್ಲಾ ಹೊರಹಾಕಿದುದರಿಂದಲೇ 'ಪರಾಕ್ರಮ ಕಂಠೀವ'ರಾದರೋ ಏನೋ—ಭಾಗವತರು— 'ಇರುವಂಥಾಸ್ಥಳ?' ಕೇಳಿದರು.

ಕೌ—"ಹಸ್ತಿನಾಪುರಕ್ಕೆ ಯಾರೆಂದು ಕೇಳಿಬಲ್ಲಿರಿ?"

ಭಾ—"ಕೌರವೇಶ್ವರ ಮಹಾರಾಯರು"

ಕೌ—"ಅಂದುಕೊಳ್ಳಬಹುದು"

ಭಾ—"ಬಂದಂಥಾ ಕಾರ್ಯ?" ಕೌ—"ಬಹಳವಾಗಿರುತ್ತದೆ, ಚಾರಕರು ಸಿಂಹಾಸನವನ್ನು ತಯಾರುಮಾಡಿರುತ್ತಾರೋ"

ಇಷ್ಟೂ ಭಾಗವತ ಕೌರವೇಶ್ವರ ಮಹಾರಾಯರೊಳಗೆ ನಡೆದ ಸಂಭಾಷಣೆ. ಆ ಮೇಲೆ ಕೌರವೇಶ್ವರರೊಬ್ಬರೇ, ಬಹಳವಾಗಿರುವ ಬಂದಂಥಾ ಕಾರ್ಯವನ್ನು ಮಾಡತೊಡಗಿದರು.

ಮೊದಲಾಗಿ ತನ್ನನ್ನು ಹುಟ್ಟಿಸಿದ ಧೃತರಾಷ್ಟ್ರನು ಹುಟ್ಟಿದಲ್ಲಿಂದ ಸುರುಮಾಡಿದರು. ಹೇಳುತ್ತಾ ಹೇಳುತ್ತಾ ತಾನು ಹೊಟ್ಟೆಯಲ್ಲಿರುವಾಗ ಗಾಂಧಾರಿ ಅವಸರದಿಂದ ಹಿಸುಕಿಕೊಂಡ ದೂರನ್ನೂ ನಮ್ಮೊಡನೆಲ್ಲಾ ಹೇಳಿದರು. ಆಕೆಯು ಹಿಸುಕಿಕೊಳ್ಳುವಾಗ ಎಲ್ಲಿಯೋ ಕೈಯುಗುರು ಕೌರವೇಶ್ವರನ ಕಂಠನಾಳಕ್ಕೆ ತಾಗಿ ತೂತಾಗಿರುವದೇ ಇಷ್ಟು ದೊಡ್ಡ ಶಬ್ದ ಹೊರಡಲು ಕಾರಣವಿರಬಹುದು. ರಜತಾದ್ರಿಗೆ ಪರಮೇಶ್ವರ-ಲಂಕೆಗೆ ರಾವಣೇಶ್ವರ-ಹಸ್ತಿನಾವತಿಗೆ ಕೌರವೇಶ್ವರ-ಇಂಥಾ ಕೌರವೇಶ್ವರ ಮಹಾರಾಜರು ತನ್ನ ತಾಯಿಯ ತಪ್ಪಿನ ಪರಿಣಾಮವನ್ನು ಈಗಲೂ ಅನುಭವಿಸುತ್ತಿರುವರಲ್ಲಾ-ಅಂದ ಮೇಲೆ ಸಾಮಾನ್ಯನಾದ ನಾನು ನನ್ನ ತಾಯಿಯ ಅಜಾಗ್ರತೆಯ ಫಲವಾದ ನರಿಯ ಕೂಗಿನ ಹೆದರಿಕೆಯನ್ನು ಅನುಭವಿಸು

ತ್ತಿರುವದೇನು ದೊಡ್ಡದು—ಎಂಬ ಸಮಾಧಾನದಿಂದ ಕಣ್ಣಿಗಲ್ಲೇ ನಿದ್ರೆ ಹಿಡಿಯಿತು.

ಆ "ಪೊರೆಗೈದ...'' ಪದ್ಯ ಒಂದರ ಅರ್ಥಕ್ಕೇ ಒಂದು ತಾಸು ಹಿಡಿದುದರಿಂದ, ಆ ಮಧ್ಯೆ ಚಂಡೆ ಜಾಗಂಟೆಗಳ ಉಪದ್ರವಿಲ್ಲದುದರಿಂದ, ನನ್ನ ನಿದ್ರೆಗೆ ಭಂಗಬರಲಿಲ್ಲ. ನಾನು ಎಷ್ಟು ಹೊತ್ತು ನಿದ್ರಿಸಿದೆನೋ ತಿಳಿಯದು. ನಾನು ಅಲ್ಲೇ ಹೊರಳುವಾಗ "ಬಂದನು ದೇವರ ದೇವ"|| ಎಂದು ಭಾಗವತರು ಅತಿ ಪ್ರಯಾಸದಿಂದ ಕೂಗುವದು ಕಿವಿಗೆ ಬಿತ್ತು. "ಹೋ! ದೇವರ ದೇವನೇ ಎದ್ದು ಬರುವಾಗ ನಾನು ಮಲಗಿರುವುದೇ!" ಎಂದು ಜಗ್ಗನೆ ಎದ್ದುಬಿಟ್ಟೆ. ಅದು ಕೃಷ್ಣನ ಒಡ್ಡೋಲವಾಗಿತ್ತು. ನಮ್ಮ ಕೀರ್ತಿವಂತ ಶ್ರೀಧರ ಶೆಟ್ರು ಕೃಷ್ಣನಾಗಿ ಆವೇಶದಿಂದ ಮಾತಾಡತೊಡಗಿದರು. ಕಾರಂಜಿಯ ನೀರಿನಂತೆ ತುಂತುರು ತುಂತುರಾಗಿ ಸಿಡಿಯುವ ಶಬ್ದಗಳು, ತೂಕಕ್ಕೊಂದಿಷ್ಟೂ ಕಡಿಮೆಯಾಗದಂತೆ ನಾಲ್ಕು ದಿಕ್ಕುಗಳನ್ನೂ ಆಳೆಯುವ ತಲೆಕೈಗಳು-ಹೀಗಿತ್ತು ನಮ್ಮ ಶೆಟ್ರ ಅರ್ಥಗಾರಿಕೆ.

ಸುಮಾರು ಮುಕ್ಕಾಲು ಘಂಟೆಯಲ್ಲೇ ಮೊದಲಿನ ಪದಾರ್ಥವು ಸಮಾಪ್ತಿಯಾದೊಡನೆಯೇ ಭಾಗವತರು ಎರಡನೇ ತಯಾರಿಗಾಗಿ ಜಾಗಂಟೆಯನ್ನು ಕೆಳಗಿಟ್ಟರು; ಕಂಠವನ್ನೂ ಶ್ರುತಿಯನ್ನೂ ಒಟ್ಟೊಟ್ಟಿಗೆ ಸರಿಮಾಡಿ, ಎಡಕೈಯನ್ನು ಕೆನ್ನೆಗೂ ಕಿವಿಗೂ ಒತ್ತಿ ಹಿಡಿದು, ಮಹಾಸ್ವರವೊಂದನ್ನು ಕೂಡಲೇ ಹೆರುವ (ಗಾಂಧಾರಿಯಂತೆ) ಸಾಹಸಮಾಡಿದರು. ಅದು 'ಭಾಮಿನಿ'ಯಾದುದರಿಂದ ಅಷ್ಟು ಕೆಲಸವಂತೆ. "ಪರಮಷಡುರಸ....ಶಯನ ಗೈದಿರಲೂ || ತರುಣಿಯರು ಸಿರಿಚರಣ ಸೇವೆಯ ....ತೆರೆದರೆನಯನ .. ನಿದ್ರಾಂಗನೆಯ ಕೇಳಿಯಲೀ | ಈ ಈೀ ಈೀೀ || ಇದರ ಅರ್ಥಕ್ಕೂ ಬೇಕಾಯಿತು ಅರ್ಧತಾಸು. ಕೊನೆಗೆ "ಕಣ್ಣುಗಳನ್ನು ಅರ್ಧ ತೆರೆದುಕೊಂಡು ನಿದ್ರಾಂಗನೆಗೆ ಮೈಕೊಟ್ಟುಬಿಡುತ್ತೇನೆ. ಭಲ್ರೋ!" ಎಂದು ಹೇಗೂ ನಿಲ್ಲಿಸಿದರು.

'ಇನ್ನೇನು? ಮಾತಾಡಿ ದಣಿದ ಕೃಷ್ಣನಿಗೆ ಸರೀ ನಿದ್ರೆ ಹಿಡಿಯುವದು ಉಪದ್ರವೊಂದು ತಪ್ಪಿತೆ'ಂದು, ಕಣ್ಣುಮುಚ್ಚುತ್ತೇನೆ-ಪೂರಾ ಮುಚ್ಚಲಿಕ್ಕೆ ಭಾಗವತರು ಬಿಡುತ್ತಾರೆಯೇ? (ಪ್ರಾಯಶ: ಇದರಿಂದಲೇ ಕೃಷ್ಣನೂ ಕಣ್ಣನ್ನು ಅರೆತೆರೆದು ನಿದ್ರೆಮಾಡುವದು) "ಚರಣಾಬ್ಜದೆಡೆ

ಯಲ್ಲಿ..." ತೊಡಗಿಯಾಯಿತು. ಒಡನೆಯೇ ಕೌರವನೂ ಬಂದು ಆಯಿತು; ಅರ್ಜುನನು ಕಾಲಡಿಯಲ್ಲಿ ನಿಂತುದಕ್ಕೆ ಕೇಕೆ ಹಾಕಿ ದರ್ಪದಿಂದ ಕೃಷ್ಣನ ತಲೆಯು ಬುಡದಲ್ಲಿ ಕುಳಿತೂ ಆಯಿತು. ಕೃಷ್ಣನೆದ್ದು ಮೊದಲು ಅರ್ಜುನನ್ನು ನೋಡಿ ಉಪಚರಿಸಿದ; ಆ ಮೇಲೆ ಕೌರವನನ್ನು ಉಪಚರಿಸಿದನೆಂದು—ಕೌರವನು 'ಆಗಲಿ ನಿನ್ನ ಅರ್ಜುನನಿಗೆ ಉಪಚಾರ!" ಎಂದು ಗದರಿಸಿದ. ಕೃಷ್ಣನು ಸಮಾಧಾನಮಾಡಿ, ಬಂದ ಕಾರ್ಯವ ಬೆಸಸಿರೆಂದ. ಕ್ಷತ್ರಿ ಪಂಥಕ್ಕಾಗಿ ಮಾಡುವ ಯುದ್ಧಕ್ಕಾಗಿ ಸಹಾಯಕೇಳಲಿಕ್ಕಾಗಿ ಉಭಯತ್ರರೂ ಬಂದಿರುವರೆಂಬುದನ್ನು ಕೇಳಿ (ಜಾಗಂಟೆ ರಹಿತ ಭಾಮಿನಿ)–'ಧರಣಿಗೋಸುಗ ನೀವು ನಿಜಸೋ | ದರು ಹಳಚುವಿರ್ಯಾಕೆ..........ನೀವು ಪಾಂಡವರೆರಕವಿರೆ ನಾವು || "........ನೀವು ನೂರೊಂದು ಮಂದಿ ಕೌರವರೂ ಐದು ಮಂದಿ ಪಾಂಡವರೂ ಒಟ್ಟೊಟ್ಟಿಗಿರುವದು ಎಷ್ಟು ಚಂದ ನೋಡು ಕೌರವಾ!" ಎಂದು ಕೃಷ್ಣನು ವೈಯ್ಯಾರದಿಂಗ ಹೇಳುವಾಗ ಎಂಥವನಾದರೂ ಚಂದನೋಡಬೇಕಿತ್ತು! ಆದರೆ ಅದನ್ನೆಲ್ಲಾ ಕೌರವನು ಮಾಡಿಯಾನೆ? ಒಡನೆಯೇ "ಎಲೈ ಕೃಷ್ಣ. ನಾವು ನೂರೊಂದು ಮಂದಿಯೆಂದು ಹೇಳಿಬಿಟ್ಟೆಯಷ್ಟೆ-ಯಾರು ಯಾರ್ರೆಂದು ಹೇಳು ನೋಡೋಣ" ಎಂದುಬಿಟ್ಟ. ಕೃಷ್ಣನು ಒಮ್ಮೆಗೆ ತಬ್ಬಿಬ್ಬಾದ. ದ್ವಾಪರಾಯುಗದ ಕೋಷ್ಟಕಗಳಲ್ಲಿ ಆ ಹೆಸರುಗಳ ಮಾಲೆಯಿತ್ತೋ ಏನೋ-ಈಗಿನ ಮಗ್ಗಿಪುಸ್ತಕಗಳಲ್ಲಿ, ಸಂವತ್ಸರ, ತಿಥಿ, ನಕ್ಷತ್ರಗಳ ಹೆಸರು ಹೊರತು, ಈ ಮಾಲೆಯಿಲ್ಲ. ನಮ್ಮ ಈ ಕಲಿಯುಗದ ಕೃಷ್ಣನೇನು ಮಾಡಿಯಾನು? ಉಪಾಯದಿಂದ "ಕೌರವೇಶ್ವರ, ಅವರಿಗೆಲ್ಲಾ ಹೆಸರಿಟ್ಟವಳು ಗಾಂಧಾರಿ. ನೀವು ವಾಪಾಸು ಹೋಗಿ ನಿಮ್ಮ ಮಾತುಶ್ರೀಯವರನ್ನು ವಿಚಾರಿಸಿದಲ್ಲಿ ವೇದ್ಯವಾಗಬಹುದು" ಎಂದ.

ಕೌ—"ಆಗಲಿ ಬಿಡು. ನಾವೆಲ್ಲಾ ಮಾತುಶ್ರೀಯವರ ಮಕ್ಕಳಾದುದರಿಂದ ಅವರೊಡನೇ ಕೇಳಬೇಕೆನ್ನುತ್ತೀಯಾ-ಹೋಗಲಿ. ಕೃಷ್ಣಾ ನಿನಗೆ ಹದಿನಾರು ಸಾವಿರ ಹೆಂಡಿರಿರುವರಲ್ವೆ? ಅವರ ಹೆಸರನ್ನಾದರೂ ಹೇಳು."

ಸಭೆಯಲ್ಲಿ ತಟಪಟ ಚಪ್ಪಾಳೆಯಾಯಿತು.

ಕೃ—(ಸಿಟ್ಟಿನಿಂದ) ಎಲೈ ಕೌರವ, ನನ್ನ ಹೆಂಡಿರ ಹೆಸರನ್ನು

ಕೇಳ್ತೀಯಾ. ಅವರಿಗೇನು ತಾಯಂದಿರಿಲ್ಲೆಂದು ನೆನಸಿದೆಯಾ, ನಿನ ಹಾಗೆಯೇ ತಾಯಂದಿರುವಾಗ ಅವರೊಡನೆಯೇ ಕೇಳು".

ಸಭಿಕರಿಂದ ಚಪ್ಪಾಳೆ ಮತ್ತು 'ಭೇಷ್'ಗಳು.

ಕೌ—ಏ, ಕಳ್ಳ ಕೃಷ್ಣ. ಹೆಂಡಿರ ಹೆಸರನ್ನು ಹೇಳಲಾರದ ಹೇಡಿ! ಹೆಸರು ಗೊತ್ತಿಲ್ಲವೆಂದು ಹೇಳಿಬಿಡು. ನಿನ್ನ ಹೆಂಡಿರ ಹೆಸರೇನೆಂದು ತಿಳಿಯಲಾರದ ನೀನು ನಮ್ಮ ಕುರುಕುಲದವರ ಹೆಸರೆತ್ತುತ್ತೀಯಾ— ಅಯ್ಯಾ ಭಾಗವತರೇ, ಇವನ........"

ಕೃ—(ಮಧ್ಯದಲ್ಲೇ ಬಾಯಿ ಹಾಕಿ) "ಹೇ ಮೂರ್ಖ ಕೌರವ! ಲೋಕದಲ್ಲಿ ಹೆಂಡ್ತೀರ ಹೆಸರನ್ನು ಹೇಳುವ ರೂಢಿಯುಂಟೇನೊ? ತಲೆ ಗೆಟ್ಟು ಏನೇನೋ ಬಗಳುತ್ತೀಯಾ?

(ಸಭಿಕರಿಂದ ಡಬ್ಬಲ್-ಡಬ್ಬಲ್ ಚಪ್ಪಾಳೆ, ಭೇಷ್‌ಗಳು) ನಿವಾಳಿಸು ಇಲ್ಲಿಂದ. ಇಲ್ಲವಾದ್ರೆ ನಿನ್ನನ್ನೀಗಲೇ ಏನು ಮಾಡುತ್ತೇನೆ. ನೋಡು"

ಕೌರವನು ರೌದ್ರಾವೇಶದಿಂದ ಎದ್ದ. ಕೃಷ್ಣನೂ ಬೈಯುತ್ತಾ ಎದ್ದುನಿಂತ. ಕೌರವ ಕೈ ಮುಂದುವರಿಸಿಯೇ ಬಿಟ್ಟ. ಕೃಷ್ಣನೂ ತನ ಮಹಿಮೆಯನ್ನೆಲ್ಲಾ ಮರೆತು ಮುಷ್ಟಿಪ್ರಹರ ಮಾಡಿದ. ಒಡನೆಯೇ ತೊಡಗಿಬಿಟ್ಟಿತು **ಸಂಧಾನದಲ್ಲಿ ಕಾಳಗ!** ಈ ಗೌಜಿಯಿಂದ ಎಚ್ಚತ್ತವರೆಲ್ಲಾ ಓಡಿಬಂದು ಪಂಚಾಯತಿಕೆಯ ಕೆಲಸ ಮಾಡಿದರು—ಜಗಳದ ಕಾರಣಗಳನ್ನು ಶೋಧಿಸತೊಡಗಿದರು. "ರಾತ್ರಿ ಇಡೀ ನಿದ್ರೆ ಬಿಟ್ಟವರಿಗೆ ಈಗ ತಾನೇ ಮೂಡಿದ ಸೂರ್ಯನ ಎಳೆಬಿಸಿಲು ತಲೆಗೆ ಹೊಡೆದುದೇ ಈ ಜಗಳದ ಮುಖ್ಯ ಕಾರಣ" ಎಂದು ನಮ್ಮ ಡಾಕ್ಟರ್ ಸಾಹೇಬರಿತ್ತ ಸೂಚನೆಗೇ ಬಹುಮತ ದೊರೆಯಿತು.

ಅಬಿಸೀನಿಯಕ್ಕೆ ಎಲ್ಲಾ ರಾಜ್ಯಗಳೂ ಶಸ್ತ್ರಾಸ್ತ್ರಗಳನ್ನು ಕಳುಹಿಸುತ್ತಿರುವ ಈ ಕಾಲದಲ್ಲಿ, ನಮ್ಮ ಚಂಡೆ, ಮದ್ದಳೆ, ಜಾಗಂಟೆಗಳನ್ನು ಕಳುಹಿಸಿದುದೇ ಆದರೆ, ಅಲ್ಲಿ ಜನರನ್ನು ಒಟ್ಟು ಕೂಡಿಸುವ ಕೆಲಸಕ್ಕೆ ಇವು ಅನುಕೂಲವಾಗುವವು. ಇಲ್ಲಿ ಗಲಭೆಯೆಬ್ಬಿಸುವ ಈ ಉಪಕರಣಗಳು ಅಲ್ಲಿ (ಇಲ್ಲಿ ಶಾಂತಿ ಖಂಡಿತ) ಲೋಕ ಶಾಂತಿಗೆ ನೆರವಾಗಬಲ್ಲವು. ಲೀಗ್ ಸಭೆಯು ಈ ಸೂಚನೆಯನ್ನು ಮಂಜೂರು ಮಾಡುವದೆಂದು ಆಶಿಸುತ್ತೇನೆ.

—ಬೀದಿಬಸವ.

---

# ೫ ಗೇಣಿಗಾಗಿ ನೇಣು!



ಗೇಣಿಗಾಗಿ ಹೆಣ್ಣು ಕೊಟ್ಟು ಮನೆ ಪವಿತ್ರ ಮಾಡಿಕೊಂಡವರ ವರ್ತಮಾನವನ್ನು ನೀವೂ ಓದಿರಬಹುದು. ಸಂಯುಕ್ತ ಪ್ರಾಂತ್ಯದಲ್ಲಿ ಇಪ್ಪತ್ತು ರೂಪಾಯಿಗಳಿಗಾಗಿ ಇಪ್ಪತ್ತು ವರ್ಷ ಪ್ರಾಯ ಮಿಕ್ಕಿದ ಮಗಳನ್ನು ಕೊಟ್ಟು ಗೇಣಿ ಸಂದಾಯಮಾಡಿ ಬದುಕಿಕೊಂಡ—ಯಾ—ಬದುಕಿ ಸತ್ತ ರೈತನ ವಾರ್ತೆಯನ್ನು ಬಲ್ಲಿರಷ್ಟೆ! ಈ ಕಾಲದಲ್ಲಿ ಬಹು ಅಗ್ಗದ ವಸ್ತುವಾವುದೆಂಬುದು ತಿಳಿಯಿತಲ್ಲ. 'ಗೇಣಿಗಾಗಿ ಹೆಣ್ಣು' ಎಂದಿದ್ದುದು ಹೋಗಿ 'ಗೇಣಿಗಾಗಿ ನೇಣು' ಬಂದುದನ್ನು ನೋಡಿ ಇದೇನು ಹೀಗಾಯಿತು ಎಂದು ನೀವೂ ಸ್ವಲ್ಪ ಯೋಚಿಸಬಹುದು! ಆದರೆ ಸ್ವಲ್ಪ ಸೂಕ್ಷ್ಮವಾಗಿ ಆಲೋಚನೆ ಮಾಡಿದಿರಾದರೆ ನಿಮಗೆ ಅದರ ಗುಟ್ಟು ತಿಳಿದೀತು. ನಿಮ್ಮ ಅಜ್ಜ ಮುತ್ತಜ್ಜರನ್ನು ಒನ್ನಿರೆಂದು ಕರಕೊಂಡು ಹೋದ ಯಮಧರ್ಮ ರಾಯನಿದ್ದಾನಲ್ಲಾ; ಆತನ ಆ ಕೈಯಲ್ಲಿರುವುದೇನು ಗೊತ್ತುಂಟೆ?- ಇದೇ ನೇಣು! ಹಾಗಿದ್ದ ಮೇಲೆ ನೇಣನ್ನು ಅಷ್ಟು ತಾತ್ಸಾರ ಮಾಡಲಿಕ್ಕಾಗುವುದಿಲ್ಲವೆನ್ನಿ. ಹೆಣ್ಣೆಂದರೆ ಒಂದು ಜೀವ; ನೇಣು ಎಂದರೆ ಅಂಥ ಜೀವಗಳನ್ನು ತೆಗೆಯುವ ಜೀವ; ಅಂತೂ ಗೇಣಿಯೆಂದರೆ ಇಂತಹ ಜೀವಿಗಳಿಂದಲೇ ಸಂದಾಯವಾಗಬೇಕಾದ ಅತ್ಯುತ್ತಮ ಜೀವ. ಆದ್ದರಿಂದ ಗೇಣಿಯ ಬದಲಿಗೆ ಒಂದೋ ಹೆಣ್ಣು ಕೊಡಬೇಕು; ಇಲ್ಲವೇ ನೇಣು ತೆಗೆದುಕೊಳ್ಳಬೇಕು—ಇವೆರಡರಲ್ಲಿ ಯಾವುದು ಆಗಬಹುದು ನೋಡಿ!

ತ್ಯಾಂಪನು ರಾಮಣ್ಣ ಗೌಡರ ಆಸ್ತಿಗೆ ಒಕ್ಕಲಾಗಿ ಕುಳಿತು ಕಳೆದ ಮಾಘ ಬಹುಳ ಅಮಾವಾಸ್ಯೆಗೆ ಪೂರ್ತಿ ಐದು ವರುಷ! ಅವನು ಒಕ್ಕಲು ಬರುವಾಗ ಪ್ರಾಯ ೫೦ ವರ್ಷ; ಅವನ ನೂರು ವರ್ಷದ ಆಯುಸ್ಸಿನಲ್ಲಿ ಬಾಕಿ ಐವತ್ತು ವರುಷವು ಈ ಐದು ವರ್ಷಗಳಲ್ಲಿಯೇ ತುಂಬಿ ಬಂದು ತ್ಯಾಂಪನ ಒಂದು ಜನ್ಮವೆಂಬುದು ಸಾರ್ಥಕವಾಗಿ ಮೊನ್ನೆ ತಾನೇ ಕೊನೆಗೊಂಡಿತು. 'ಕಾಗೆಯಾಗಿ ಸಾವಿರ ವರ್ಷ ಬಾಳುವುದಕ್ಕಿಂತ ಗಿಣಿಯಾಗಿ ಒಂದು ವರುಷ ಬದುಕುವುದು ಮೇಲು' ಎಂಬ ಗಾದೆಯುಂಟಲ್ಲಾ—

ಹಾಗೆಯೇ ಆಯಿತು ತ್ಯಾಂಪನ ಜೀವಮಾನ! ಅಂತಹ ಮಹತೋಬಾರಿ ರಾಮಣ್ಣ ಗೌಡರ ಒಕ್ಕಲಾಗಿ ಬಾಳಿ ಬದುಕುವ ಭಾಗ್ಯವೇನು ಸಾಮಾನ್ಯವೆಂದು ಭಾವಿಸಿದ್ದೀರಾ? ಪಾಪದವ ಜನ್ಮ ಸಾರ್ಥಕಮಾಡಿಕೊಂಡ ನೋಡಿ, ರಾಮಣ್ಣಗೌಡರ ಬೀರೊಟ್ಟು ಮನೆಯಡಿಯಲ್ಲಿ ಹತ್ತುಮುಡಿ ಮುಳು ಮೂತ ಬೈಲುಗದ್ದೆಗಳಿದ್ದು, ತೋಟ, ಕಾಡು, ಸೊಪ್ಪು ಸದೆಯೆಲ್ಲಾ ಅನುಕೂಲವೇ; ನೀರಿಗೂ ಕೊರತೆಯಿಲ್ಲ. ಹೀಗಾಗಿ ಎಲ್ಲರೂ ಅಪೇಕ್ಷಿಸುತ್ತಿದ್ದ ಸ್ಥಳ. ಅದನ್ನು ತಿಳಿದೇ ತ್ಯಾಂಪಣ್ಣ ತನ್ನ ಜೀವಮಾನದಲ್ಲಿ ಕೂಡಿಸಿಟ್ಟಿದ್ದ ೫೦೦ ರೂಪಾಯಿಗಳನ್ನು ಮುಂಗೇಣಿಕೊಟ್ಟು ೮೦ ಮುಡಿ ಅಕ್ಕಿ ಮತ್ತು ನೂರುರೂಪಾಯಿ ಗೇಣಿಗೆ ವಹಿಸಿಕೊಂಡಿದ್ದ. "ಬಿಟ್ಟಿಬೇಗಾರಿ ಮಾಡಿಕೊಂಡು ಬಂದೇನು, ಯೋಜ್ಯ ಜಾಮೀನು ಕೊಟ್ಟು, ಬೆಳೆ ಕಟಾಯಿಸೇನು.." ಇತ್ಯಾದಿ ಶರ್ತಗಳ ಸಮೇತ ಗೇಣಿಚೀಟು ಬರೆಯಿಸಿಕೊಟ್ಟು ನಾಲ್ಕುಜೋಡಿ ಕೋಣಗಳನ್ನು ಕಟ್ಟಿ ಅಚ್ಚುಕಟ್ಟಿನಿಂದ ಸಾಗುವಳಿ ಮಾಡಹತ್ತಿದ. ಅವನ ಇಬ್ಬರು ಮಕ್ಕಳೂ ಬೆಳಗಿನಿಂದ ಸಂಜೆಯುವರೆಗೂ ದುಡಿಯುವವರೆ! ಹೇಗೂ ಧನಿಯ ಗಂಟು ಕಾರ್ತಿ ಸುಗ್ಗಿ ಕೊಳಕೆಯಲ್ಲಿ ಹೋದರೆ-ನೆಲ್ಲು ಬತ್ತದಿಂದಲಾದರೂ ಒಂದಿಷ್ಟು ತೆಳಿ ಕುಡಿದುಕೊಂಡು ಮರ್ಯಾದೆಯಿಂದ ದಿನವೊಂದು ತೆಗೆಯಬಹುದಲ್ಲಾ-ಎಂದು ತ್ಯಾಂಪನ ಯೋಚನೆ.

ತ್ಯಾಂಪನು ಒಕ್ಕಲು ಬಂದ ವರ್ಷವೇ ಗೌಡರು ಹೆಂಡತಿ ಮಕ್ಕಳಿಗೆ ಮನೆ ಕಟ್ಟಿಸಿಕೊಡುವ ಪುಣ್ಯದ ಕೆಲಸಕ್ಕೆ ಕೈಹಾಕಿದ್ದರು. ಆಗ ತ್ಯಾಂಪನು "ಬಿಟ್ಟಿಬೇಗಾರಿ ಮಾಡಿಕೊಂಡು ಬಂದೇನು" ಎಂಬ ಶರ್ತದಂತೆ ನಡಕೊಳ್ಳಬೇಕಲ್ಲ. ಈ ಶರ್ತಕ್ಕೊಳಪಟ್ಟ ತ್ಯಾಂಪನವರಿಂದಲೇ ಗೌಡರ ಸ್ಥಳದಲ್ಲಿ ಮಣ್ಣುಹೋಗಿ ಮನೆಯಾಗಬೇಕಾಗಿದೆ. ತ್ಯಾಂಪನ ಇಬ್ಬರು ಮಕ್ಕಳೂ ಎರಡು ದಿನಕ್ಕೊಮ್ಮೆ ಬಿಟ್ಟಿಗೆ ಹೋಗಲೇಬೇಕಾಗಿ ಬಂತು, ತ್ಯಾಂಪನು ಒಬ್ಬ ಮಗನನ್ನು ಹುಟ್ಟಿಸಿದುದೇ ಗೌಡರ ಬಿಟ್ಟಿಗಾಗಿ ಎನ್ನುವಂತಾಯಿತು. ಗೌಡರೂ ಮನೆ-ಆಸ್ತಿಯನ್ನು ಅನುಭವಿಸಬಲ್ಲ ಮಕ್ಕಳನ್ನು ಹುಟ್ಟಿಸಿದುದರಿಂದ, ತ್ಯಾಂಪನೂ ಅದಕ್ಕೆ ನೆರವಾಗಬಲ್ಲ ಮಗನನ್ನು ಹುಟ್ಟಿಸದೆ ನಿರ್ವಾಹವಿಲ್ಲದಾಯಿತು. ಇಲ್ಲಿ ತ್ಯಾಂಪನ

ಮನೆಕೆಲಸದ ವಿಚಾರ; ಅದು ತ್ಯಾಂಪನಿಂದಲೇ ಆಗಬೇಕು, ಇಲ್ಲವೇ ಕೂಲಿಗೆ ಜನ ಹಿಡಿಯಬೇಕು. ಅನ್ಯರ ಒಕ್ಕಲಾಗಿ ಕುಳಿತು ಕೂಲಿ ಕೊಟ್ಟು ಕೆಲಸಮಾಡಿಸಿ ಪ್ರಯೋಜನವೇನು? ಅಂತೂ ಆದಷ್ಟು ಕೆಲಸ ಆಯಿತು; ಬಾಕಿ ಉಳಿದುದು ಹಾಗೆಯೇ ಉಳಿಯಿತು. ಆ ವರ್ಷ್ನಮನೆಯ ಸೊತ್ತು ಮೊದಲಾದುವುಗಳನ್ನು ಮಾರಿ—ಸಿಕ್ಕಿದವರಿಂದೆಲ್ಲಾ ಸಾಲ ಪಡೆದು ಹೇಗೂ ಗೇಣಿ ಸಂದಾಯಮಾಡಿದ. ಮರುವರ್ಷ ಗೇಣಿಯಲ್ಲಿ ಅರ್ಧಕ್ಕರ್ಧ ಬಾಕಿಯಾಯಿತು. ಮೂರನೇ ವರ್ಷ ಹೇಗೋ ಮಾಡಿ ಗೇಣಿಗೆ ಜಾಮೀನು ಕೊಟ್ಟು ಬೆಳೆ ಕಟಾವು ಮಾಡಿದ. ಅಕ್ಕಿಮುಡಿಗೆ ೨॥ ರೂಪಾಯಿ ದರದಲ್ಲಿ ೪೦ ಮುಡಿ ಅಕ್ಕಿಯನ್ನು ಹೊಲಿಗೆ ಸಾಲಪಡೆದು ಮಾರಿ ನೂರು ರೂಪಾಯಿ ಗೇಣಿಯನ್ನೂ ಸಂದಾಯ ಮಾಡಿದ. ನಾಲ್ಕನೇ ವರುಷದಲ್ಲಿ ಪೇಚಾಟ ಬಲವಾಯಿತು. ಬೆಳೆ ಕೊಯಿದು ಮುಗಿಸಿದ ಮರುದಿನವೇ ಗೌಡರು ಹದಿನಾರು ಸೇರಿನ ಕಳಸಿಗೆ—ರಾಮನು ಬಗ್ಗಿಸಿ ಹಿಡಿದ ಕೋದಂಡದಂತಿರುವ ಕೋಲು (ಕಳಸಿಗೆಯ ಬತ್ತವನ್ನು ಅಳೆಯುವುದಕ್ಕಾಗಿ ಒಳಗಡೆ ಕೆತ್ತಿ ತೆಗೆದುದು) ಹಿಡಿಸಿಕೊಂಡು ಗೋಣಿ ಆಳುಗಳೊಡನೆ ಬಂದು ಎಲ್ಲವನ್ನೂ ದೋಚಿಕೊಂಡು ಹೋದರು. ಮುಂಚಿನ ಎರಡು ವರ್ಷಗಳಲ್ಲಿ ಬಾಕಿಯಾದುದಕ್ಕೆ ಹೊಲಿಗೆ ಹೊಲಿ ಹಿಡಿದು ಲೆಕ್ಕಮಾಡುವಾಗ ಅರ್ಧಕ್ಕರ್ಧ ಗೇಣಿ ಬಾಕಿ! "ಬರುವ ಮೇಷ ಸಂಕ್ರಮಣದೊಳಗೆ ಪೂರಾ ಸಲಾಯಿಸದಿದ್ದರೆ ನೇಗಿಲು ಊರಲಿಕ್ಕೆ ಬಿಡುವಂತಿಲ್ಲ; ತಿಳಿದುಕೋ!" ಎಂದು ಹೇಳಿ ಗೌಡರು ಹೋಗಿಬಿಟ್ಟರು.

ಇತ್ತ ಹೊಲಿಗೆ ತಂದ ಅಕ್ಕಿ ಸಾಲವನ್ನು ಸಂದಾಯ ಮಾಡಲಿಕ್ಕಾಗದೆ ತ್ಯಾಂಪನು ಅತ್ತ ಇತ್ತ ನೋಡಿದ; ಅಲ್ಲಿ ಇಲ್ಲಿ ಓಡಿದ; ಸಿಕ್ಕಿದವರ ಕೈಕಾಲು ಹಿಡಿದು ಅಲ್ಪಸ್ವಲ್ಪ ಕೊಟ್ಟು ಅಲ್ಲಿಂದಲ್ಲಿಗೆ ಮಾಡಿ ದಿವಸ ದೂಡುವ ಉಪಾಯವನ್ನು ಕೈಕೊಂಡ. ಐದನೇ ವರ್ಷದಲ್ಲಿ ಎಲ್ಲವೂ ಅಡಿಮೇಲಾಯಿತು. ಇನ್ನು ಗಂಟುಮೂಟೆ ಕಟ್ಟಬೇಕಾಗುವದೆಂದು ಖಂಡಿತವಾಯಿತು ತ್ಯಾಂಪನಿಗೆ. ಹೇಗಾದರೂ ಮಾಡಿ ಗೇಣಿಗೊಂದು ಹಾದಿಮಾಡಬೇಕೆಂದು ಇಬ್ಬರು ಮಕ್ಕಳನ್ನೂ ರೂಪಾಯಿ ೫೦ ಅಡ್ವಾನ್ಸ್ ಪಡೆದು ಗಟ್ಟಕ್ಕಟ್ಟಿದ. ಗೌಡರ ಕಣ್ಣು ಕೆಂಪಾಯಿತು.

ಒಂದು ದಿನ ತ್ಯಾಂಪನನ್ನು ಕರೆಯಿಸಿ "ನೀನೇನು ಬೀರೊಟ್ಟು ಮನೆಯುಡಿಯು ನಿನ್ನ ವರ್ಗದ್ದೆಂದು ಭಾವಿಸಿದೆಯಾ? ಇದ್ದ ಇಬ್ಬರು ಮಕ್ಕಳನ್ನೂ ಗಟ್ಟಕ್ಕಟ್ಟಿರುವೆಯಲ್ಲಾ—ಇಲ್ಲಿ ಬಿಟ್ಟಿಮಾಡಲು ನಿನ್ನ ಅಜ್ಜ ಬರುತ್ತಾನೆಯೇ? ಈ ವರ್ಷ ಒಂದೇ ಒಂದು ಪೈ ಬಾಕಿ ಇಡಲಾರೆ. ಒಳ್ಳೇ ಮಾತಿನಿಂದ ಗೇಣಿ ಚುಕ್ತಾಮಾಡಿದಿಯಾಯಿತು-ಇಲ್ಲವಾದರೆ ಬೇಸಕ್ಕೆ ಸಾಗುವಲ್ಲಿ ಮಾಡುವ ಚಂದ ನೋಡುತ್ತೇನೆ" ಎಂದು ಎದೆ ತಟ್ಟಿಕೊಂಡಾಯಿತು. ತ್ಯಾಂಪನು ಕಂಗಾಲಾದ. ಐವತ್ತು ರೂಪಾಯಿಗಳನ್ನು ಗೌಡರ ಪಕ್ಕದಲ್ಲಿಟ್ಟು "ಏನಾದರೂ ಕಾಸು ದುಗ್ಗಾಣಿ ಸಂಪಾದಿಸಿ ಕೊಟ್ಟರೆ ಗೇಣಿಕೊಡಬಹುದಲ್ಲಾ ಎಂದು ಗಟ್ಟಕ್ಕೆ ಕಳುಹಿಸಿದೆ. ಮೊನ್ನೆ ಒಂದು ಕಾಗದ ಹಾಕಿದ್ದೇನೆ. ರೂಪಾಯಿ ಬಂದ ಕೂಡಲೇ ವಿಲೆವಾರಿ ಮಾಡುತ್ತೇನೆ. ಹೇಗಾದರೂ ಮಾಡಿ ಒಮ್ಮೆಗೆ ಬದುಕಿಸಬೇಕು'' ಎಂದು ಅಡ್ಡಬಿದ್ದ. ಎಲ್ಲವೂ ನಿಷ್ಫಲ. ಗೌಡರು ಸಿಟ್ಟಿನಿಂದ ಚಾವಡಿಯಿಂದ ಅಂಗಳಕ್ಕೂ, ಅಂಗಳದಿಂದ ಚಾವಡಿಗೂ ಓಡಿ "ನಿನ್ನಿಂದ ಆಗುವದೆಲ್ಲಾ ಮಾಡಬೇಕು-ನಾನು ನೋಡುತ್ತೇನೆ! ನನ್ನ ಕಣ್ಣೆದಿರಿನಲ್ಲಿ ನಿಲ್ಲಕೂಡದು; ನಡಿಯಿಲ್ಲಿಂದ!" ಎಂದು ಆರ್ಭಟಿಸಿ ಬಿಟ್ಟರು.

ತ್ಯಾಂಪನು ಅಲ್ಲಿಂದ ಕಣ್ಣೀರಿಳಿಸುತ್ತಾ ಬಂದು ಊರ ಧನಿಕರ ಬಳಿಗೆಲ್ಲಾ ಓಡಿದ. "ಕನ್ಯ ತಿಂಗಳಿಗೆ ಎಲ್ಲಾ ಸಲಾಯಿಸುತ್ತೇನೆ. ಐವತ್ತು ರೂಪಾಯಿಕೊಡಿ; ಎರಡಕ್ಕೊಂದು ಪೊಲಿಕೊಡುತ್ತೇನೆ-ಇಪ್ಪತ್ತು ಮುಡಿ ಅಕ್ಕಿ ಕೊಡಿ" ಎಂದು ಕಂಡ ಕಂಡವರೊಡನೆ ಕೇಳಿದ. ಇವನ ಅವಸ್ಥೆ ಬಲ್ಲವರೆಲ್ಲಾ ಸಾಲಕೊಡಲು ಹಿಂಜರಿದರು. ರಾಮಣ್ಣ ಗೌಡರಿಗೆ ಸಮಾಧಾನ ಹೇಳಿ ಹೇಗಾದರೂ ಬಚಾವು ಮಾಡುವಂತೆ ಮಾಡಬೇಕೆಂದ ಹಲವು ಸಂಭಾವಿತರ ಬಳಿಗೆ ಹೋದ. ಹೋಗುವಾಗ ಬದನೆಕಾಯಿ, ಕುಂಬಳಕಾಯಿಗಳ ಹೊರೆಯನ್ನು ಕೊಂಡುಹೋದ. ಕೆಲವರು ನೋಡೋಣ"ಎಂದು ಹೇಳಿಹೋದವರು ರಾಮಣ್ಣ ಗೌಡರಿಗೆ ಅನುಕೂಲವಾಗಿಯೇ ಮಾತಾಡಿ ಬಂದರು. ಇನ್ನು ಕೆಲವರು ನೋಡು ತ್ಯಾಂಪ! ಏನಾದರೂ ಧನಿಗಂಟಿಗೆ ಮೋಸ ಮಾಡಲು ನೋಡುವವನು ಒಳ್ಳೆಯದಾಗುವದಿಲ್ಲ. ನಿನ್ನ ಕರ್ಮ—ಹೀಗೆಲ್ಲಾ ಮಾಡಿದರೆ ನಿನಗಿನ್ನು ಸ್ಥಳ

ಯಾರು ಕೊಟ್ಟಾರು! ಇದ್ದುದನ್ನು ಅವರಿಗೆ ಬಿಟ್ಟುಕೊಟ್ಟು ನೀನೂ ಗಟ್ಟಹತ್ತುವದೇ ಒಳ್ಳೆಯದು ಎಂದು ಹಿತೋಪದೇಶ ಮಾಡಿದರು.

ತ್ಯಾಂಪನಿಂದ ಕೊನೆಯ ವರೆಗೂ ಯಾವುದೂ ಸಾಗಲಿಲ್ಲ. ಮನೆಯ ಮಕ್ಕಳು ಮರಿಗಳಿಗೆ ದಿನಕ್ಕೊಂದು ಗಂಜಿಯಂತೆ ಕೊಟ್ಟು ಜೇಪತಿಂಗಳ ವರೆಗೆ ಕಾಲಹರಣ ಮಾಡಿದ ಏನೇ ಆಗಲಿ. ಮಳೆಬೀಳಹತ್ತಿದಾಗ ಸಾಗುವಳಿಯ ಯೋಜಹದೆಯೊಂದು ಹುಟ್ಟುತ್ತದಲ್ಲಾ—ತ್ಯಾಂಪನಲ್ಲಿ ಕೋಣಗಳಿರಲಿಲ್ಲ. ಕೊಂಡುಕೊಳ್ಳುವುದಕ್ಕೆ ಹಣದ ಚಿಕ್ಕಾಸೂ ಇರಲಿಲ್ಲ. ಮನೆಯಲ್ಲಿ ಇದ್ದುದೆಂದರೆ, ಮಗಳಿಗೆ ಅವಳ ಗಂಡ ಮಾಡಿಸಿ ಹಾಕಿದ್ದ ಗೆಜ್ಜೇಟೀಕೊಂದು ಅದನ್ನುಕೊಂಡುಹೋಗಿ ವೈಕುಂಠ ಕಮ್ತಿಯರಲ್ಲಿ ಅಡವಿಟ್ಟು ಎಪ್ಪತ್ತು ರೂಪಾಯಿತಂದು, ಬಡಕಲಾದ ಎರಡು ಜೋಡಿ ಕೋಣಗಳನ್ನು ತಂದಾಯಿತು. ಸಾಗುವಳಿಗೊಂದು ಬಗೆಯಾ ಯಿತು;ಇದ್ದದರಲ್ಲಿ ಚೊಕ್ಕಟವಾಗಿ ದುಡಿದರೆ, ಏನಾದರೂ ನಾಲ್ಕು ತಿನೆಬಿಟ್ಟರೆ, ಗೇಣಿ ಮತ್ತುಸಾಲಕ್ಕಾಗಿ ಮಕ್ಕಳು ಗಟ್ಟದಿಂದ ಕಳುಹಿಸಿದರೆ, ಹೇಗಾದರೂ ದಡಹಿಡಿಯಲಿಕ್ಕಾಗುತ್ತದೋ ನೋಡಬಹುದು. ರಾಮಣ್ಣ ಗೌಡರು ಎಷ್ಟು ಅಬ್ಬರಿಸಿದರೂ, ತನ್ನ ಪುಣ್ಯದಿಂದ ಸಮಾಧಾನ ಮಾಡಿಕೊಂಡಾರು—ಎಂದು ತ್ಯಾಂಪನು ಒಂದಿಷ್ಟು ತೃಪ್ತಿಪಟ್ಟುಕೊಂಡ. ಒಂದು ದಿನವಿಡೀ ಉಪವಾಸ ಕುಳಿತು ಆ ಅಕ್ಕಿಯನ್ನು ದೂಮಾಚಾರಿಗೆ ಕೊಟ್ಟು ಎರಡು ನೇಗಿಲು ಮಾಡಿಸಿ, ಮರುದಿನವೇ ಕೊಟ್ಟಿಮಾರು ಗದ್ದೆಯಲ್ಲಿ ಉಳುವದಕ್ಕೆ ಕಟ್ಟಿದ. ಈ ದಿನ ಎರಡು ಸಾಲುಮಾಡಿ ಉತ್ತರಾಯಿತು; ಇನ್ನೊಮ್ಮೆ ಮಳೆಬಂದು ನೀರು ನಿಂತೊಡನೆ ಪುನಃ ಎರಡು ಸಾಲುಮಾಡಿ ಹಲಿಗೆ ಹಾಕಿದರೆ ಮತ್ತೊಮ್ಮೆ ನೆಡುವದಕ್ಕೆ ಅನುಕೂಲವಾಗುತ್ತದೆ. ಹೀಗೆ ಸಕಾಲದಲ್ಲಿ ಸಾಗುವಳಿ ಮಾಡಿದರೆ ನಾಲ್ಕು ಮುಡಿ ಅಕ್ಕಿಯಾದರೂ ಅಧಿಕವಾದೀತು ಎಂದು ತ್ಯಾಂಪನ ಭರವಸೆ. ನೇಗಿಲ ಸಾಲು ಬೀಳುತ್ತಾ ಬಂದಂತೆ, ಅರುಣೋದಯ ಕಾಲದಲ್ಲಿ ಕುಡಿದಿದ್ದ ತ್ಯಾಂಪನ ತೆಳಿಗಂಜಿಯು ಹೊಟ್ಟೆಯಲ್ಲಿ ಕರಗುತ್ತಾ ಬರುತ್ತಿದೆ. ಆದರೆ ಆ ನಷ್ಟವು ಆತನ ಲಕ್ಷ್ಯಕ್ಕೆ ಬಂದಿಲ್ಲ. ನೇಗಿಲ ಯೋಗಿಯು ತಲ್ಲೀನನಾಗಿ 'ಓ ಓೀ' ಎಂದು ಆನಂದದ ಓಂಕಾರವನ್ನೆಬ್ಬಿಸುತ್ತಿದ್ದಂತೆಯೇ ಇದಿರುಗಡೆಯಲ್ಲಿ ಹತ್ತೆಂಟು ಮಂದಿ ದೊಣ್ಣೆ

ಗಳನ್ನು ಹಿಡಿದುಕೊಂಡು ಗದ್ದೆಗಿಳಿದರು. "ಗೌಡರು ಗೇಣಿಯ ವಿಲೆವಾರಿ ಮಾಡದೆ ಉಳುವದಕ್ಕೆ ಆಗುವದಿಲ್ಲವೆಂದು ಹೇಳಿದ್ದಾರೆ. ಗೇಣಿಬಾಕಿ ಕೊಟ್ಟು ಈ ಕೋಣಗಳನ್ನು ಬಿಡಿಸಿಕೊಂಡು ಹೋಗಬೇಕಂತೆ" ಎಂದು ಹೇಳಿ ಕೋಣಗಳ ಹಗ್ಗ ಬಿಚ್ಚಿ ಹೊಡೆದುಕೊಂಡು ಹೋಗಿಬಿಟ್ಟರು! ತ್ಯಾಂಪನು ಏನೋ ಪ್ರಾರ್ಥಿಸಿಕೊಳ್ಳಲು ಮುಂದಾದನು; ಅವರಲ್ಲಿ ಇಬ್ಬರು ಹಿಡಿದು ಬಲವಾಗಿ ಎರಡು ಗುದ್ದಿ ಇವನನ್ನು ಜಾಡಿಸಿಬಿಟ್ಟರು. ತ್ಯಾಂಪನು ಉಸಿರ್ಗರೆಯುತ್ತಾ ಖಾಲಿ ಹಗ್ಗಗಳನ್ನು ಹಿಡಿದುಕೊಂಡು ಮನೆಗೆ ಬಂದ; ಅವನೇನು ಹಗ್ಗವನ್ನು ಖಾಲಿಯೇ ಇಟ್ಟಾನೆಂದು ಭಾವಿಸಿದಿರಾ? ಈ ದಟ್ಟ ಮಳೆಗಾಲದಲ್ಲಿ ಸುತ್ತುಮುತ್ತಣಿಂದ 'ಭರಲು' ಕೇಳಿ ಬರುತ್ತಿರುವ ಈ ಕಾಲದಲ್ಲಿ ಯಾವ ರೈತನಾದರೂ ಹಾಗೆ ಮಾಡಿಯಾನೆ?

ತ್ಯಾಂಪನು ರೈತರ ಧರ್ಮಕ್ಕೆ ಭಂಗವನ್ನು ಮಾಡಲಿಲ್ಲ. ಮರುದಿನ ಬೆಳಿಗ್ಗೆ ನೋಡುವಾಗ ಅದೇ ಹಗ್ಗವು ಕೊರಳಿಗೆ ಸುತ್ತಿದ್ದ ತ್ಯಾಂಪನ ಕಾಯವು ಮನೆ ಹಿಂಬದಿಯ ಮಾವಿನ ಮರದ ಮೂಡು ಪಾರ್ಶ್ವದ ಗೆಲ್ಲಿನಲ್ಲಿ ನೇತಾಡುತ್ತಿದ್ದಿತು. ಕೊರಳು ಸಂಪೂರ್ಣವಾಗಿ ಬಿಗಿದುಹೋಗಿತ್ತು ಹಾಗಾಗದೆ ಅರಳಿಕೊಂಡಿರುವುದು ಎಲ್ಲಿಯ ತುತ್ತನ್ನು ನುಂಗುವದಕ್ಕಾಗಿ? ಕೆಲಸವಿಲ್ಲದ ಕಂಠನಾಳವು ಖಾಲಿಬಿದ್ದ ನೇಣನ್ನು ಸೇರಿತು—ಹಾಗೆಯೇ ಆಗಬೇಕು!!

— ಬಸವ.

# ೬. ಹಸ್ತಲಕ್ಷಣ.

* * * * * * *

ಕುಂದೇಶ್ವರ ತಾಲೋಕು ಆಫೀಸಿನ ವರಂಡದಲ್ಲಿ ಮುದಿ ಇಸ್ಮಾಲಿಯು ಬೇಸಗೆಯ ಸೆಕೆಯಿಂದ ಹಾಗೆ ಕಣ್ಣುಗೂರುತ್ತಾ, ಅದೊಂದು ಸಜೀವ ಯಂತ್ರದಂತೆ ಪಂಕದ ರಾಟೆಯನ್ನು ಗರ-ಗರ-ಗರ- ಎಳೆಯುತ್ತಾ ಒಂದು ಕೈ ದಣಿದಾಗ ಇನ್ನೊಂದು ಕೈ, ಎರಡೂ ದಣಿದಾಗ ಹಗ್ಗವನ್ನು ಕಾಲಿಗೆ ಸಿಕ್ಕಿಸಿ ಬಹಳ ಸಾವಕಾಶವಾಗಿ ಅತ್ತಿತ್ತ ಎಳೆಯುತ್ತಿದ್ದನು. ಮಧ್ಯೆ ಮಧ್ಯೆ ಇಸ್ಮಾಲಿಯು ಒಮ್ಮೆಯೇ ಎರಡು ಕೆಲಸಮಾಡುವ ಗೊಡವೆ ಬಿಟ್ಟು ಒಂದಕ್ಕೇ ಮನಸ್ಸು ಕೊಟ್ಟು ನಿದ್ದೆಹೋಗುವನು. ತಹಸಿಲ್‌ದಾರ ಶಾಮುರಾಯರಿಗೆ ಪೇನು ಓಡಿಸಿ ಓಡಿಸಿ ಮೈ ಬೆವರಲಿಕ್ಕಾರಂಭಿಸಿದೊಡನೆಯೇ "ಬದ್ಮಾಶ್ ಇಸ್ಮಾಲಿ!" ಎಂದು ಕೂಗುವರು. ಇಸ್ಮಾಲಿಯು "ಹುಜೂರ್!" ಎಂದು ದಡಬಡ ಎದ್ದು ಪಂಕದ ಹಗ್ಗಹಿಡಿಯುವನು. ಯಥಾಪ್ರಕಾರ ಕೆಲಸಕ್ಕೆ ತೊಡಗುವನು. ಪ್ರಖರ ಸೂರ್ಯಕಿರಣಗಳು ನಿರ್ದಯವಾಗಿ ಕಚೇರಿಯ ವಠಾರವನ್ನೆಲ್ಲಾ ಸುಡಲಾರಂಭಿಸಿದ್ದುವು. ಜನರೆಲ್ಲಾ ಹತ್ತಿರದ ಗೋಳೀಮರದ ನೆರಳಲ್ಲಿಯೋ ವರಂಡದಲ್ಲಿಯೋ ಕೂತು "ಸೋಡಾ, ಬೀಡ, ಬೀಡಿ, ಸಿಗರೇಟ್! ಸೋಡಾ, ಬೀಡ. ಬೀಡಿ, ಸಿಗರೇಟ್!" ಎಂದು ಸುತ್ತುವ ಹುಡುಗರ ಕೂಗು ಅರಣ್ಯರೋದನವಾಗದಂತೆ ಕಾಸುತಾರಗಳ ವ್ಯಾಪಾರಮಾಡಿ, ಎಡೆಬಿಡದೆ ಮಾತಾಡಿ ಮಾತಾಡಿ ಬಚಿಹೋದ ಬಾಯಿಯನ್ನು ಮಸೆದುಕೊಳ್ಳುತ್ತಿದ್ದರು. ಎಲ್ಲಾ ಜನರಲ್ಲಿಯೂ ಕಡು ಬೇಸಗೆಯ ಆಯಾಸದ ಆಲಸ್ಯವು ಒಡೆದು ಕಂಡುಬರುತ್ತಿತ್ತು. ಎಲ್ಲರ ಮುಖವೂ ಕಂದಿಹೋಗಿತ್ತು; ಸ್ವರವು ಕುಗ್ಗಿತ್ತು; ದೇಹವು ಬೆವತು ಹೋಗಿದ್ದಿತು.

ಶಾಮುರಾಯರು ನೋಡಿ ನೋಡಿ ಮುಗಿಸಿದಷ್ಟು ರಿಕಾರ್ಡಿನ ದಪ್ತರಗಳನ್ನು ದಫೇದಾರನು ಮೇಜಿನ ಮೇಲೆ ತಂದಿಡುತ್ತಿದ್ದನು. ದಪ್ತರುಗಳ ನೋಟವೇ ರಾಯರನ್ನು ಬೇಸರಗೊಳಿಸುತ್ತಿದ್ದಿತು. ಬಲು ತಾಪಕಾರಕ ವಾಸ ಹವೆಯಲ್ಲಿ ದಿವಸ ಇಡೀ ಕೂತು ಕೆಲಸ ಮಾಡಿ ಮಾಡಿ ರಾಯ

ರಿಗೆ ಸಾಕು ಸಾಕಾಗಿದ್ದಿತು. ರಿಕಾರ್ಡುಗಳ ದಪ್ತರುಗಳು ಅನಂತವಾಗಿರುವಂತೆ ಅವರಿಗೆ ಗೋಚರಿಸಿತು. ಶಾಮರಾಯರು ೩ ತಿಂಗಳ ಮೊದಲು ವರ್ಗಹೊಂದಿ ಕುಂದೇಶ್ವರಕ್ಕೆ ಬಂದವರು. ಅವರ ಪತ್ನಿ ರಾಧಾಬಾಯಿಯು ತಂದೆಯ ಕಾಯಿಲೆಯ ನೆವದಿಂದ ಕುಂದೇಶ್ವರಕ್ಕೆ ಬರಲೊಪ್ಪದುದರಿಂದ ಅವಳನ್ನು ಅಲ್ಲಿಯೇ ಬಿಟ್ಟು ರಾಯರು ಓರ್ವರೇ ಕುಂದೇಶ್ವರಕ್ಕೆ ಬರಬೇಕಾಯಿತು. ಕುಂದೇಶ್ವರದಲ್ಲಿ ರಾಯರಿಗೆ ಯಾರೂ ಆಪ್ತರಿರದೆ ಅದೊಂದು ದೊಡ್ಡ ಹಳ್ಳಿಯಂತಿದ್ದುದರಿಂದ ರಾಯರ ಬೇಸರದ ಬೆಳವಣಿಗೆಗೆ ಹುಲುಸು ಕ್ಷೇತ್ರವು ದೊರೆಯಿತು. ಟೆನ್ನಿಸು, ಬಿಲಿಯಾರ್ಡ್ಸ್, ಬ್ರಿಜುಗಳ ಗಂಧಗಾಳಿ ಸೋಕದ ೧೯ನೇ ಶತಮಾನದ ಜನರೇ ಕುಂದೇಶ್ವರದಲ್ಲಿರುವುದೆಂದು ರಾಧಾಬಾಯಿಗೆ ರಾಯರು ಆಗಾಗ್ಗೆ ಬರೆಯುತ್ತಿದ್ದರು. ರಾಧಾಬಾಯಿಯು ತಾನು ರಾಯರ ಸಮಾಗಮವನ್ನು ದಿನೇ ದಿನೇ ಹಾರೈಸುತ್ತಾ ಕೃಶಳಾಗುತ್ತಿರುವೆನೆಂದು ಪ್ರೇಮಪೂರಿತ ಪತ್ರ ಬರೆಯುತ್ತಿದ್ದಳು. ಶಾಮರಾಯರು ಈ ನೀರಸ ಕೆಲಸಕ್ಕೆ ತಾನೇಕೆ ಬಂದೆನೆಂದು ಹಲವು ವೇಳೆ ವೈರಾಗ್ಯಪಟ್ಟದ್ದೂ ಉಂಟು. ಹೇಗೂ ಈಗ ೧೦ ವರ್ಷ ಸರ್ವಿಸ್ ಆದ ಮೇಲೆ ಪುನಃ ಹೊಸ ಜೀವನವನ್ನಾರಂಭಿಸುವುದೆಂದರೆ ಕಷ್ಟಸಾಧ್ಯ. ಶಾಮರಾಯರು ಮಂಗಳಾಪುರವನ್ನು ಬಿಟ್ಟು ಕುಂದೇಶ್ವರಕ್ಕೆ ಬಂದಂದಿನಿಂದ ಜೀವನದಲ್ಲಿಯೇ ಅಭಿರುಚಿ ತೊಲಗಿ ಹೋಗಿತ್ತು. ಲೋಕವೇ ನಿಸ್ಸಾರವಾಗಿ ತೋರುತಿತ್ತು. ಶಾಮರಾಯರಿಗೆ ಚಿಕ್ಕಂದಿನಿಂದಲೂ ಯಾವುದಾದರೊಂದು ಸರಕಾರಿ ಉದ್ಯೋಗ ಪಡೆದು ಮೆರೆದಾಡಬೇಕೆಂದು ಬಹಳ ಆಶೆಯಿದ್ದಿತು. ಅಂತೆಯೇ ರೆವಿನ್ಯೂ ಡಿಪಾರ್ಟ್‌ಮೆಂಟಿಗೆ ಸೇರಿ ಥಕ್ಕನೆ ಪ್ರೊಮೋಶನ್ ಪಡೆದು ಶ್ರೀಮಂತ ಸುಂದರಿ ನವಯೌವನೆ ರಾಧಾಬಾಯಿಯನ್ನು ವಿವಾಹವಾಗಿ ಸುಖದಿಂದಿದ್ದರು. ಈಗ ಬೆಡಗು ವಿಲಾಸದ ರಾಧಾಬಾಯಿಯು ಮತ್ತು ಮನೋಹರ ಮಂಗಲಾಪುರದ ಅಗಲುವಿಕೆಯು ಅವರ ಜೀವನದ ಸುಖಾಂಬುಜಕ್ಕೆ ಶಿಶಿರದೋಪಾದಿಯಾಯಿತು. ಅವರು ಎಲ್ಲವನ್ನೂ ದ್ವೇಷಿಸತೊಡಗಿದರು. ದಿನೇ ದಿನೇ ಸೊರಗಿ ಕ್ಷೀಣವಾಗಿದ್ದರು. ಮನೆಯಲ್ಲಿ ಅಡಿಗೆಭಟ್ಟ, ಪೇದೆಯರು ಆಫೀಸಿನಲ್ಲಿ ದಫೇದಾರ, ಕ್ಲಾರ್ಕರುಗಳ ಮೇಲೆ ಉರಿದು ಬೀಳುತ್ತಿದ್ದರು.

ಕುಂದೇಶ್ವರದಲ್ಲಿ ಹೇಗೂ ಕೆಲ ಸಮಯ ದೂಡಿ, ಪುನಃ ಮಂಗಳಾ ಪುರಕ್ಕೆ ವರ್ಗಾಯಿಸಿಕೊಳ್ಳಬೇಕೆಂದು ಶಾಮರಾಯರು ನಿಂತು ಹೋಗಿದ್ದ ಪೇನನ್ನು ಸರಸರ ಮುಂದೆ ಸಾಗಿಸಿ ರಿಕಾರ್ಡು ಕಟ್ಟುಗಳನ್ನೆಲ್ಲಾ ಒಂದೊಂದನ್ನೇ ಮುಗಿಸಿದರು. ಆಫೀಸು ಮುಚ್ಚುವ ಸಮಯವಾದೊಡನೆಯೇ ಕೆಲಸ ಮುಗಿಸಿ ಆಫೀಸಿನ ಹತ್ತಿರವೇ ಇರುವ ತನ್ನ ಮನೆಗೆ ಹೋಗಿ ಆಫೀಸ್ ಡ್ರೆಸ್ಸಿನ ಕಾಟದಿಂದೊಮ್ಮೆ ವಿಮುಕ್ತರಾಗಿ ಬರೀ ಮುಂಡನ್ನುಟ್ಟು ಬನಿಯನ್ ಹಾಕಿ ಈಸಿಚ್ಛೇರಿನ ಮೇಲೆ ಬಿದ್ದುಕೊಂಡು ಚುರುಟಿನ ಹೊಗೆಯನ್ನು ಮೆಲ್ಲಗೆ ಗುಂಗುರ ಗುಂಗುರಾಗಿ ಬಿಡುತ್ತಾ ಆವುದೋ ಯೋಚನೆಯ ಅಮಲಿನಲ್ಲಿದ್ದು ಬಿಡುವರು. ಒಂದು ದಿನ ಹೀಗಿರುವಾಗ ಭಿಕ್ಷುಕ ವೇಷಧಾರಿಯಾದ ಕೊಳಕು ಮನುಷ್ಯನೊಬ್ಬನು ಬಂದು, "ಸಾಮಿ ನಾನೊಂದು ಭವಿಷ್ಯ ಹೇಳಲೇ?" ಎಂದನು. ಶಾಮರಾಯರು ಕೋಪಾಕ್ರಾಂತರಾಗಿ "ಹೋಗತ್ತ ಬದ್ಮಾಷ್!" ಎಂದು ಗದರಿಸಿದರು. "ನಾನು ಸತ್ಯ ಹೇಳುತ್ತೇನೆ ಬುದ್ದಿ! ಖಾವಂದರು ಇನ್ನು ಸ್ವಲ್ಪ ದಿದಸಗಳಲ್ಲಿ ಕೆಟ್ಟ ಸುದ್ದಿಯೊಂದನ್ನು ಕೇಳುವಿರಿ. ಮತ್ತು ಈ ಊರನ್ನು ಬಿಟ್ಟು ಹೋಗುವಿರಿ. ನಂತರ ದೊಡ್ಡ ಕೆಲಸವಾಗಿ ಸುಖವಾಗಿರುವಿರಿ. ಇದು ಸತ್ಯವಾದರೆ ಖಾವಂದರು ನನಗೆ ರೂ. ೫೦ ಇನಾಮು ಕೊಡಬೇಕು. ಇನ್ನು ಏಳು ದಿವಸದೊಳಗೆ ನಾನು ಬರುತ್ತೇನೆ. ಖಾವಂದರು ಕೈಯೊಮ್ಮೆ ತೋರಿಸಿದರೆ ಇನ್ನೂ ವಿಶೇಷ ಸಂಗತಿ ಹೇಳುತ್ತೇನೆ" ಎಂದು ಭಿಕ್ಷುಕನು ಬಹಳ ನಮ್ರತೆಯಿಂದ ತಲೆಬಾಗಿ ನಿಂತನು.

"ಆಯ್ತು, ನಿನ್ನ ಮೂರ್ಖತನವನ್ನೊಮ್ಮೆ ಪರೀಕ್ಷಿಸುವ. ನಿನಗೆ ಈಗ ಒಂದು ಚಿಕ್ಕಾಸೂ ಕೊಡಲಿಕ್ಕಿಲ್ಲ. ೭ ದಿವಸಗಳ ನಂತರ ನೀನು ಹೇಳಿದುದು ಸತ್ಯವಾದರೆ ಕೊಡುತ್ತೇನೆ." ಎಂದು ಶ್ಯಾಮರಾಯರು ಅಂಗೈಯನ್ನು ಮುಂಚಾಚಿದರು. ಭಿಕ್ಷುವು "ಒಳ್ಳೇದು ಬುದ್ಧಿ" ಎಂದು ಮೊಣಕಾಲೂರಿ ಕೂತು ಅಂಗೈ ರೇಖೆಗಳನ್ನೆಲ್ಲಾ ಸರಿಯಾಗಿ ಪರೀಕ್ಷಿಸಿ, "ಇನ್ನು ಕೆಲವು ದಿವಸಗಳಲ್ಲಿ ಖಾವಂದರಿಗೊಂದು ವಿಪತ್ತುಂಟಾಗುತ್ತದೆ. ಖಾವಂದರು ತನ್ನ ದಾಂಪತ್ಯ ಸುಖಕ್ಕೆ ತೊಡಕಿಲ್ಲವೆಂದು ಭಾವಿಸಿದ್ದೀರಿ. ಆದರೆ ಅದು ಹಾಗಲ್ಲ. ಖಾವಂದರ ಪತ್ನಿಯು ಎರಡು ಬಗೆಯ ಜೀವನ ನಡಿಸು

ವರು. ಇನ್ನೊಬ್ಬನನ್ನು ಪ್ರೀತಿಸುವರು. ನಿಮ್ಮ ವಿವಾಹವು ಕೆಟ್ಟುಹೋಗುವುದು"ಎಂದಾಗ ರಾಯರು "ಫಟಿಂಗ! ಬಾಯಿಗೆ ಬಂದಂತೆ ಒದರಬೇಡ! ಅದಕ್ಕೆಲ್ಲಾ ಕಿವಿಕೊಡುವವನು ನಾನಲ್ಲ! ಅಸಂಬದ್ಧ ನುಡಿಯುತ್ತೀ ಬಾಂಚೋತ್!" ಎಂದು ಗದರಿಸಿದರು. "ಖಾವಂದರ ಮುಂದೆ ನಾನು ಎಂದೆಂದಿಗೂ ಸುಳ್ಳು ಹೇಳುವುದಿಲ್ಲ. ಇನ್ನು ಕೆಲವು ದಿವಸಗಳಲ್ಲಿ ಖಾವಂದರಿಗೆ ದೊಡ್ಡ ಕೆಲಸ ಸಿಗುತ್ತದೆ.'' ಎಂದು ಭಿಕ್ಷುವು ಪುನಃ ಹೇಳಿದನು. "ನಡಿಯುತ್ತೀಯೋ ಇಲ್ಲವೋ ಹೊರಗೆ!'' ಎಂದು ಶಾಮರಾಯರು ಈಸಿಚೇರಿನಿಂದ ಜಗ್ಗನೆ ಎದ್ದು "ನೀನು ಹೇಳುವುದರಲ್ಲಿ ಒಂದಕ್ಷರವನ್ನೂ ನಾನು ನಂಬಲಾರೆ" ಎಂದು ಅಬ್ಬರಿಸಿದಾಗ ಭಿಕ್ಷುವು ತಾನು ಹೇಳಿದ್ದೆಲ್ಲಾ ಸತ್ಯವೆಂದೂ, ಇನ್ನು ೭ ದಿವಸಗಳಲ್ಲಿ ಇನಾಮುಪಡೆಯಲು ಹಿಂತಿರುಗಿ ಬರುವೆನೆಂದೂ ಪುನಃ ಪುನಃ ಹೇಳಿ ನುಸುಳಿಬಿಟ್ಟನು.

ರಾತ್ರಿ ಊಟವಾದ ಮೇಲೆ ಶಾಮರಾಯರು ಹೊರಗೆ ವರಂಡದಲ್ಲಿ ಪುನಃ ಬಂದು ಈಸಿಚೇರಿನಲ್ಲಿ ಒರಗಿ ಹಿಂದು ಪತ್ರಿಕೆಯನ್ನು ಓದಲಾರಂಭಿಸಿದರು. ಸೆಕೆಯು ವಿಪರೀತವಾಗಿತ್ತು. ತಾಲೋಕು ಕಚೇರಿಯಿಂದ ಪೇದೆಗಳ ಜಗಳದ ಕರ್ಕಶ ಸ್ವರವು ಕರ್ಣಕಠೋರವಾಗಿ ಕೇಳಬರುತ್ತಿತ್ತು. ಹತ್ತಿರದಲ್ಲೆ ನರಿಗಳು ವಿಕಾರವಾಗಿ ಕೂಗಿ ರಾತ್ರಿಯನ್ನು ಭಯಂಕರಗೊಳಿಸುತ್ತಿದ್ದವು. ಸಮೀಪದಲ್ಲಿದ್ದ ಪಂಚಮ ಕೇರಿಯಲ್ಲಿ ಅನೇಕ ನಾಯಿಗಳೊಳಗೆ ಯಾವ ಕಾರಣದಿಂದಲೋ ಭಿನ್ನಾಭಿಪ್ರಾಯವುಂಟಾಗಿ ಗಲಾಟೆಯುಂಟಾಗಿತ್ತು. ಇವೆಲ್ಲವೂ ಶಾಮರಾಯರನ್ನು ಅತ್ಯಂತ ನಿರುತ್ಸಾಹಗೊಳಿಸಿ ಅವರು ತನ್ನ ವಾಚನವನ್ನು ಮುಂದುವರಿಸದಾದರು. ಆ ಬಡ ಭಿಕ್ಷುವಿನ ಮಾತುಗಳು ಪದೇ ಪದೇ ಅವರ ಮನಸ್ಸನ್ನು ಪೀಡಿಸಹತ್ತಿದವು. ಅದನ್ನು ಉಚ್ಚಾಟನೆ ಮಾಡಲು ಎಷ್ಟೊಂದು ಪ್ರಯತ್ನಿಸಿದರೂ ಶಾಮರಾಯರಿಂದದು ಸಾಧ್ಯವಾಗಲಿಲ್ಲ. ರಾಯರು ತನ್ನ ವಾಚನ್ನು ತೆಗೆದು ನೋಡಿದರು. ೧೨ ಗಂಟೆ ದಾಟಿಹೋಗಿತ್ತು. ತನಗೆ ಜ್ವರಬರುವಂತಿದೆಯೆಂದು ಸ್ವಲ್ಪ ಕ್ವಿನಿನನ್ನು ತೆಗೆದುಕೊಂಡು ಮಲಗಿಬಿಟ್ಟರು.

ಬೆಳಗ್ಗೆ ಬೇಗ ಎದ್ದು ತಿರುಗಾಟಕ್ಕೆ ಹೊರಟರು. ಪ್ರಭಾತದ ಮಂದಾನಿಲವು ಮನೋಹರವಾಗಿ ಬೀಸುತಿತ್ತು. ತಾನು ಮುಂಚಿನ ರಾತ್ರಿ,

ನಿರುತ್ಸಾಹಿತನಾದುದು ಹುಚ್ಚುತನವೆಂದು ಶಾಮರಾಯರು ಆತ್ಮ ತಿರಸ್ಕಾರ ಮಾಡಿಕೊಂಡರು. ಜೀವನವು ಸರ್ವಸಾಮಾನ್ಯ ಸುಂದರವಾಗಿರುವುದು. ತಾನಿನ್ನು ಸ್ವಲ್ಪ ಸಮಯದಲ್ಲಿಯೇ ೧೫ ದಿವಸ ರಜೆಪಡೆದು ರಾಧಾಬಾಯಿಯನ್ನು ಸೇರುವೆನೆಂದು ಹಿಗ್ಗಿಕೊಂಡರು. ತಿರುಗಾಟದಿಂದ ಹಿಂತಿರುಗಿದಾಗ ಪೇದೆಯು ಟಪ್ಪಾಲನ್ನು ತಂದು ಮೇಜಿನ ಮೇಲಿಟ್ಟಿದ್ದನು. ರಾಯರು ಬೇಗಬೇಗನೆ ಇತರ ಕಾಗದಗಳನ್ನೆಲ್ಲಾ ಅತ್ತಿತ್ತ ಮಗುಚಿ ರಾಧಾಬಾಯಿಯ ಕಾಗದಕ್ಕಾಗಿ ಹುಡುಕಹತ್ತಿದ್ದರು. ಅವಳ ಅಕ್ಷರದ ಪರಿಚಯ ರಾಯರಿಗೆ ಚೆನ್ನಾಗಿದ್ದಿತು. ಕೊನೆಗೆ ನಿರಾಶೆಯಿಂದ ಹಣೆಯಲ್ಲಿ ಹನಿಹನಿಯಾಗಿ ಒಸರಿದ್ದ ಬೆವರನ್ನು ಕರವಸ್ತ್ರದಿಂದ ಒರಸಿ ಈಸಿಚೇಯರಿನಲ್ಲಿ ಕುಳಿತು ಯೋಚನಾಮಗ್ನರಾದರು. ಸ್ವಲ್ಪ ಸಮಯದ ನಂತರ ಟಪ್ಪಾಲನ್ನೆಲ್ಲಾ ಬಹಳ ಬೇಸರದಿಂದ ಒಡೆದು ನೋಡತೊಡಗಿದರು. ಅದರಲ್ಲಿ ಶಾಮರಾಯರ ಚಿಕ್ಕ ತಂದೆಯ ಮಗ ರಾಮರಾಯನ ಕಾಗದ ಒಂದಿದ್ದಿತು. ಅಪರೂಪವಾಗಿ ಬಂದಿರುವ ಈ ಕಾಗದದ ಸಮಾಚಾರವೇನಿರಬೇಕೆಂದು ರಾಯರು ಆತುರದಿಂದದನ್ನು ಓದತೊಡಗಿದರು. ಅದನ್ನೋದಿದ ಕೂಡಲೆ ಸ್ತಂಭಿತರಾದರು. ಇದೇನು ಸ್ವಪ್ನವೋ ನಿಜವಾದುದೊ ಎಂದು ಅವರು ತಿಳಿಯದಾದರು. ಕಾಗದವನ್ನು ಪುನಃ ಓದಿದರು. ಕಾಗದವು ಯಥಾರ್ಥವಾದುದೆಂದು. ಖಚಿತಮಾಡಿದ್ದರು. ದೊಪ್ಪನೆ ಈಸಿಚೇರಿನ ಮೇಲೆ ಬಿದ್ದುಬಿಟ್ಟರು.

ಮೂರು ದಿವಸಗಳ ಮೊದಲು ಪ್ರೇಮಪೂರಿತ ಕಾಗದ ಬರೆದಿದ್ದ ರಾಧಾಬಾಯಿಯು ಶಾಮರಾಯರನ್ನು ವಂಚಿಸುವುದಕ್ಕಾಗಿಯೇ ಹಾಗೆ ಮಾಡಿದ್ದಳು. ಅವಳು ಶಾಮರಾಯರ ಮೇಲೆ ನಿಜವಾದ ಪ್ರೇಮವುಳ್ಳವಳಾಗಿರಲಿಲ್ಲ. ಮಂಗಳಾಪುರದ ಡಾಕ್ಟರ್ ಮನಮೋಹನ ರಾಯರಮೇಲೆ ಅನುರಕ್ತಳಾಗಿದ್ದಳು. ಆದುದರಿಂದಲೇ ಶಾಮರಾಯರೊಡನೆ ಕುಂದೇಶ್ವರಕ್ಕೆ ಬರಲುಒಪ್ಪದೆ ಮಂಗಳಾಪುರಲ್ಲಿಯೇಉಳಿದು ಮನಮೋಹನ ರಾಯರೊಂದಿಗೆ ಸುಖವಿಲಾಸದಲ್ಲಿ ಮಗ್ನಳಾಗಿದ್ದಳು. ನಂತರ ಇವರೀರ್ವರೂ ನಿರಾತಂಕವಾಗಿ ಸುಖಿಸುವಂತೆ ಗುಟ್ಟಿನಿಂದ ಇಬ್ಬರೂ ಮಂಗಳಾಪುರದಿಂದ ಹೊರಟು ಎಲ್ಲಿಯೋ ನಡೆದುಬಿಟ್ಟರು. ಮನಮೋಹನ ರಾಯರ ಆಪ್ತ

ಮಿತ್ರರು ಅವರು ಸಿಂಗಪುರಕ್ಕೆ ಹೋಗಿರುವರೆಂದು ತಿಳಿದಿದ್ದರು. ಈ ವೃತ್ತಾಂತವನ್ನೆಲ್ಲಾ ತಿಳಿಸಿ ರಾಮರಾಯನು ಶಾಮರಾಯರಿಗೆ ಕಾಗದ ಬರೆದಿದ್ದನು.



ಶಾಮರಾಯರು ಎಚ್ಚತ್ತು ಕಾಗದವನ್ನು ಪುನಃ ಓದಿದರು. "ಅಷ್ಟೊಂದು ಸುಂದರವೆನಿಸುತ್ತಿದ್ದ ಗುಲಾಬಿಯೊಳಗೆ ಇಂತಹ ಕರಾಳ ವಿಷಕೀಟವಿದ್ದಿತೇ! ನಾನೆಷ್ಟು ಮೋಸಹೋದೆನು! ವಿಧಿಯು ಎಂತಹ ಕ್ರೂರಿಯು!" ಎಂದೆಲ್ಲಾ ಹಲವು ವಿಧ ಹಂಬಲಿಸತೊಡಗಿದರು. ಕೂಡಲೆ ಅವರಿಗೆ ಆ ಭಿಕ್ಷುವು ಹೇಳಿದ ಭವಿಷ್ಯದ ನೆನಪಾಯಿತು, ಅವನು ಹೇಳಿದ ಮೊದಲಿನ ಮಾತು ಸತ್ಯವಾದಂತಾಯಿತು. ಮಾನವನ ಭವಿಷ್ಯವು ಹೀಗೆ ಪೂರ್ವನಿರ್ಧರಿತವಾಗಿರುವುದೆಂದರೇನು? ಕೊಳಕು ಭಿಕ್ಷುವೊಬ್ಬನು ಅದನ್ನು ಮುಂದಾಗಿ ಹೇಳುವುದೆಂದರೇನೆಂದು ಚೋದ್ಯಪಟ್ಟರು. ಈ ಲೋಕದಲ್ಲಿ ಎಲ್ಲವೂ ನಿಸ್ಸಾರವೆಂದು ದೀರ್ಘ ನಿಃಸ್ವಾಸಬಿಟ್ಟರು. ಪ್ರಭಾತದಲ್ಲಿ ಸುಖದಾಯಕವಾಗಿದ್ದ ಲೋಕವು ಮಧ್ಯಾಹ್ನದಲ್ಲಿಯೇ ದಾರುಣ ದುಃಖದಾಯಕವಾಯಿತು. ಶಾಮರಾಯರ ಹೃದಯವು ಸ್ಫೋಟವಾಗಲಿರುವ ಜ್ವಾಲಾಮುಖಿಯಂತೆ ತಳಮಳಿಸುತ್ತಿದ್ದಿತು. ಅವರ ಜೀವನ ವೃಕ್ಷವನ್ನೇ ಆಕಸ್ಮಿಕ ಮಾರುತವು ಬುಡಕಿತ್ತು ಉರುಳಿಸಿತು. ತೀವ್ರ ವೈರಾಗ್ಯ ಕಾರ್ಮುಗಿಲು ಅವರ ಜೀವನವನ್ನು ಕವಿದು ಕ್ಷುಬ್ಧಗೊಳಿಸಿತು.

ಮರುದಿವಸ ರಾಯರು ಚಿತ್ರದ ಗೊಂಬೆಯಂತೆ ಈಸಿಚೇಯರಿನಲ್ಲಿ ಒರಗಲು ಪೋಸ್ಟ್ ಪೇದೆಯು ಎಂದಿನಂತೆ ನಮಸ್ಕಾರ ಹೊಡೆದು ಟಪ್ಪಾಲನ್ನು ಮೇಜಿನ ಮೇಲಿಟ್ಟು ಪುನಃ ಸಲಾಂ ಮಾಡಿ ಹೋಗಿಬಿಟ್ಟನು. ಶಾಮರಾಯರು ಬೆಳಿಗ್ಗೆ ಸುಮಾರು ೧೧ ಗಂಟೆಗೆ ದಫೆದಾರನು ಬಂದು ನಮಸ್ಕರಿಸುವಾಗ ಫಕ್ಕನೆ ಎಚ್ಚತ್ತಂತಾಗಿ ಟಪ್ಪಾಲನ್ನೆಲ್ಲಾ ನೋಡಿದರು. ಅದರಲ್ಲಿ ಅವರು ಬಳ್ಳಾರಿಯ ಡಿವಿಜನಲ್ ಆಫೀಸರರಾಗಿ ನೇಮಕ ಹೊಂದಿರುವರೆಂದೂ, ಕೂಡಲೇ ಕೆಲಸಕ್ಕೆ ಹಾಜರಾಬೇಕೆಂದೂ ಸರಕಾರದ ಹುಕುಮೊಂದಿದ್ದಿತು. ರಾಯರು ಇದನ್ನೋದಿ ವಿಕಾರವಾಗಿ ನಕ್ಕರು. ಪುನಃ ಅವರಿಗೆ ಹಸ್ತಲಕ್ಷಣ ಹೇಳಿದ ಭಿಕ್ಷುವಿನ ನೆನಪಾಯಿತು. ಮರುದಿವಸ ಕೊಳಕು ಭಿಕ್ಷುವು ಬಂದು ಶಾಮರಾಯರೊಡನೆ ತನ್ನ ಇನಾಮನ್ನು ಕೇಳಿದನು. ಶಾಮರಾಯರಿಗೆ ಇವನಲ್ಲಿ

ಹಠಾತ್ತಾಗಿ ಒಂದು ವಿಧದ ಶ್ರದ್ಧೆಯುಂಟಾಗಿದ್ದಿತು. ಕೂಡಲೇ ಅವನನ್ನು ಕುಳ್ಳಿರಿಸಿ ರೂ. ೨೫ನ್ನು ತಂದುಕೊಟ್ಟರು. ಅವನು "ಇನ್ನಿಪ್ಪತ್ತೈದು ಕೊಟ್ಟರೆ ಖಾವಂದರ ವಿಷಯ ಇನ್ನೂ ಹೆಚ್ಚಿನಭವಿಷ್ಯ ಹೇಳುವೆನೆ"ಂದನು. ಆಯಿತೆಂದು ಶಾಮರಾಯರು ಒಪ್ಪಿದರು. "ನಾನೆಂದೂ ಸುಳ್ಳು ಹೇಳುವುದಿಲ್ಲ. ಖಾವಂದರವರು ಬೇಗನೆ ಜಿಲ್ಲಾ ಕಲೆಕ್ಟರಾಗುವಿರಿ. ಕೊನೆಗೆ ರೆವಿನ್ಯೂ ಬೋರ್ಡು ಮೆಂಬರರಾಗಿ 'ಸರ್' ಪದವಿ ಪಡೆದು ನಿವೃತ್ತರಾಗುವಿರಿ. ನನಗೆ ಭವಿಷ್ಯ ಹೇಳುವುದರಲ್ಲಿ ಹೆಚ್ಚಿನ ಅನುಭವವಿದೆ. ನಾನು ಹೇಳುವುದೆಲ್ಲಾ ಸತ್ಯ"ವೆಂದು ಭಿಕ್ಷುವು ಇನ್ನಿಪ್ಪತ್ತೈದು ರೂ. ಬಗಲೊಳಗೆ ಹಾಕಿ ನಡೆದುಬಿಟ್ಟನು. ರೆವಿನ್ಯೂ ಬೋರ್ಡು 'ಸರ್' ಪದವಿಯ ಕುರಿತೆಲ್ಲಾ ತಿಳುವಳಿಕೆಯಲ್ಲಿರುವ ಈ ಬಿಕ್ಷುವು ಯಾರಾಗಿರಬಹುದೆಂಬುದನ್ನು ವಿಚಾರಿಸಬೇಕೆಂದು ಶಾಮರಾಯರು ದಫೇದಾರನಿಗೂ ಕ್ಲಾರ್ಕರಿಗೂ ತಿಳಿಸಿದರು. ಮತ್ತು ತನ್ನ ಪ್ರಿಯತಮೆಯೆನಿಸಿದ್ದ ರಾಧಾಬಾಯಿಯ ಮನೋಹರವಾಗಿದ್ದ ಮಂಗಳಾಪುರದ ಗೋಜಿಗೇನೇ ಹೋಗದೆ ಸೀದಾ ಶಿವಮೊಗ್ಗ ಮಾರ್ಗವಾಗಿ ಬಳ್ಳಾರಿಗೆ ಹೋಗುವ ಸಲಕರಣೆ ನಡೆಸಿದರು. ಆದರೆ ಈ ವಿಚಿತ್ರ ಭಿಕ್ಷುವು ಯಾರಾಗಿರಬಹುದೆಂದು ತಿಳಿಯುವ ಕುತೂಹಲವು ಅವರಲ್ಲಿ ಪ್ರಬಲವಾಗಿದ್ದಿತು. ಕೊನೆಗೆ ಶಾಮರಾಯರ ಕ್ಲಾರ್ಕನೊಬ್ಬನಿಂದ ಭಿಕ್ಷುವಿನ ವೃತ್ತಾಂತವೆಲ್ಲವೂ ತಿಳಿದುಬಂತು. ಈ ಕೊಳಕು ಭಿಕ್ಷುವು ಮಂಗಳಾಪುರದ ಹಜೂರಿನ ದಫೇದಾರ ತಿಮ್ಮಪ್ಪನೆಂದೂ, ಅವನು ಶಾಮರಾಯರ ವೃತ್ತಾಂತವನ್ನೆಲ್ಲಾ ಮಂಗಳಾಪುರದ ಹಜೂರಿನಿಂದಲೂ, ಇತರ ಜನರಿಂದಲೂ ರಹಸ್ಯವಾಗಿ ತಿಳಿದುಕೊಂಡು ಕೂಡಲೇ ರಜೆಪಡೆದು ವೇಷಪಲ್ಲಟಿಸಿ ಕುಂದೇಶ್ವರಕ್ಕೆ ಬಂದು ಇಷ್ಟೆಲ್ಲಾ ಕಥೆನಡೆಸಿ ಪುನಃ ಮಂಗಳಾಪುರಕ್ಕೆ ಹಿಂತಿರುಗಿರುವನೆಂದೂ ತಿಳಿದುಬಂತು. ಈ ಸಂಗತಿಯನ್ನು ತಿಳಿದೊಡನೆಯೇ ಶಾಮರಾಯರಲ್ಲಿ ಸಾಮುದ್ರಿಕ ಶಾಸ್ತ್ರದ ಕುರಿತು ಹೊಸತಾಗಿ ಉಂಟಾಗಿದ್ದ ಶ್ರದ್ಧೆಯು ಮಾಯವಾಯಿತು. ಅವರು ಎಲ್ಲವನ್ನೂ ಮರೆತು ಶಿವಮೊಗ್ಗ ಮಾರ್ಗವಾಗಿ ಬಳ್ಳಾರಿಗೆ ಪಯಣ ಬೆಳೆಸಿದರು.

—§—

**— ನವಯುಗ.**

## ೭ ವಿಚಾರಣೆ ಅಥವಾ ಅಪರಾಧಿ ಯಾರು?



೧

"ಅಷ್ಟೆಲ್ಲಾ ದೂರ ಯಾಕೆ ಹೋಗಬೇಕಪ್ಪ? ಕೊರಗನೆಂದರೆ ನಮ್ಮ ಕೂಸಾಳು ದೂಮನ ಹಿರಿಯ ಮಗ ನೋಡಿ! ಈಗ ಅವನ ಕಥೆಯೇ ಬೇರೆ! ಕಾಲುದ್ದ, ಕಚ್ಚೆ, ಮೈಯುದ್ದ, ಜಿಬ್ಬ, ವಸ್ತ್ರದ ಕೊಡೆ ಯಿಲ್ಲದೆ ಅವನು ಮನೆಯಿಂದ ಹೊರಬರುವುದೆಂದಿಲ್ಲ. ಕಂಕುಳಲ್ಲಿ ಪುಸ್ತಕದ ಗಂಟು ತಪ್ಪಲಿಕ್ಕೆ ಇಲ್ಲ. ಯಾರನ್ನಾದರೂ ಕಂಡರೆ ಸವಾ ನಸ್ಕಂಧರಂತೆ ಸರಾಸರಿ ನಮಸ್ಕಾರ ಕೊಟ್ಟು ಕನ್ನಡ ಮಾತಾಡತೊಡಗು ವನಂತೆ. ಅವನು ನಮ್ಮ ಪೂಜೆಯ ಮುಕ್ಕಣ್ಣ ಭಟ್ರನ್ನು ದೂಡಿಕೊಂಡೇ ಹೋದನಂತೆ! ಏನು ಧಿಮಾಕು? ಇನ್ನೆಲ್ಲುಳಿಯಿತು ಜಾತಿನೀತಿ? ಸರ್ಕಾ ರವೇ ಪಂಚಮರನ್ನು ತಲೆಯ ಮೇಲೆ ಹೊತ್ತು ಕೊಂಡಿರುವಾಗ ನಾವೇನು ಮಾಡುವುದಪ್ಪ? ಇನ್ನು ಉಚ್ಚರು ನೀಚರೆಂದಿಲ್ಲ. ಎಲ್ಲರೂ ಒಂದೇ ನೋಡಿ." ಎಂಬೀ ಉರಿ ಮಾತುಗಳು, ಹೊಲೆಯರು ಮುಟ್ಟಲೆ ಇಟ್ಟು ಕೊಂಡು, ತೊಟ್ಟು ಕೌಪೀನಧಾರಿಗಳಾಗಿ ತಮ್ಮನ್ನು ಕಂಡ ಕೂಡಲೆ ಹತ್ತು ಗಜ ದೂರ ಹಾರಿ "ಬುದ್ಧಿ ಬಿದ್ದುಕೊಂಡೆ" ಎಂದು ಅಡ್ಡ ಬಿದ್ದು, ತಲೆ ತುಂಬ ಕುಡಿದು ಮಾನವ ಪಶುಗಳಾಗಿದ್ದ ಆ ಸತ್ಯ ಕಾಲವನ್ನೂ, ಕೊರಗನಂತಹ ವರ್ತನೆಯುಳ್ಳ ಈ ಕೆಟ್ಟ ಕಲಿಕಾಲವನ್ನೂ ತನ್ನ ಮನೋ ತಕ್ಕಡಿಯಲ್ಲಿ ತೂಗಿ ತೂಗಿ ತಲೆಯಲ್ಲಾಡಿಸಿ ಉದ್ಗರಿಸುತ್ತಿರುವ ನೆಂಟ ಸೀನಪ್ಪ ಹೆಗ್ಡೆಯವರಿಗೆ ಉತ್ತರವಾಗಿ ಕಿರಿಹಳ್ಳಿಯ 'ಕಾರ್ಬಾರಿ' ಪಟೇಲ ನಂದಪ್ಪಾಳ್ವರ ಬಾಯಿಯಿಂದ ಹೊರಟವು.

ಕಿರಿಹಳ್ಳಿಯಲ್ಲಿ ಕೊರಗಮಾಸ್ತನೆಂದರೆ ಆಬಾಲವೃದ್ಧರ ತನಕ ತಿಳಿಯದವರಿಲ್ಲ. ಅವನ ತಂದೆ ದೂಮನು ಕಿರಿಹಳ್ಳಿಯ ಬಲು ಕಾರ್ಬಾರಿ ಪಟೇಲ ನಂದಪ್ಪಾಳ್ವರ ಅಚ್ಚುಮೆಚ್ಚಿನ ಬಂಟನು. ಯಾರು ಕೆಲಸ

ಮಾಡಿದರೂ ನಂದಪ್ಪಾಳ್ವರಿಗೆ ದೂಮ ಮಾಡಿದಷ್ಟು ತೃಪ್ತಿಯಾಗದು. ಮರಗಿಡಗಳಿಗೆ ಕಟ್ಟೆಕಟ್ಟುವುದು, ಗದ್ದೆ ಉಳುವುದು, ಬಿತ್ತುವುದು. ಮೊದಲಾದುವುಗಳೆಲ್ಲಾ ಒಂದು ಚೂರು ಏರುಪೇರು, ಓರೆಕೋರೆ, ತಾಗುತಡಸಿಲ್ಲದೆ ಪಸಂದವಾಗಬೇಕಾಗಿದ್ದ ಆಳ್ವರ ಕೆಲಸಕ್ಕೆ ದೂಮನೇ ತರಬೇತಾದ ಮೇಸ್ತ್ರಿಯು. ಹೊತ್ತು ಮೂಡುವ ಒಂದು ಜಾಮದ ಮೊದಲು ಬಂದರೆ ದೂಮನು ಮನೆಗೆ ಹೋಗುವುದೆಂದರೆ ಜಾಮ ರಾತ್ರಿಗೆ. ಅವನಿಗೆ ದೊರಯುವ ಕೂಲಿಯಾದರೋ ಭರ್ತಿ ನಾಲ್ಕು ಸೇರು ಭತ್ತ. ಹಗಲು ರಾತ್ರಿ, ಹಬ್ಬ ಹುಣ್ಣಿಮೆ, ಬಿಡುವು ವಿರಾಮವೆಂದಿಲ್ಲದೆ, ನಂದ್ಯಪ್ಪಾಳ್ವರು "ಕೀ" ಕೊಟ್ಟುಬಿಟ್ಟರೆ ಸರಿ, 'ವೆಸ್ಟ್ ಎಂಡ್ ವಾಚಿನಂತೆ' ನಡೆಯುವ ಗಡಿಯಾರವೇ ದೂಮನು. ಆಳ್ವರಲ್ಲಿದ್ದುದಕ್ಕೆ ದೂಮನಿಗೆ ದೊರೆತ ಒಂದು ಗೌರವವೆಂದರೆ ಆ ಕಿರಿಹಳ್ಳಿಯ ಹೊಲೆಯರ ಗುರಿಕಾರತನ. ಅವನನ್ನು ದೂಮುಜಮ್ಮನನೆಂದು ಊರಿನ ಹೊಲೆಯರೆಲ್ಲರೂ ಅತಿ ಗೌರವದಿಂದ ಕಾಣುತ್ತಿದ್ದರು.

ದೂಮನಿಗೆ ಓದಿ ಬರೆಯುವವರನ್ನು ಕಂಡರೆ ಪ್ರಾಣ. ಆಳ್ವರ ಮನೆಯಲ್ಲಿ ಚಿಕ್ಕ ಚಿಕ್ಕ ಮಕ್ಕಳು ಬೆತ್ತದ ಬೆದರಿಕೆಯಿಂದ ಬೆಳಿಗ್ಗೆ ಬೇಗ ಎದ್ದು, ಚೀಲವನ್ನು ಕುತ್ತಿಗೆಗೆ ನೇತುಹಾಕಿ, ಹರುಕು ಮುರುಕು ಪುಸ್ತಕ ಹಿಡಿದುಕೊಂಡು, ಕಾಲಲ್ಲಾಡಿಸುತ್ತಾ, ಅತ್ತಿತ್ತ ನೋಡುತ್ತಾ 'ಅಳಿಲು, ಆನೆ. ಅ. ಆ. ಗಡಿಗೆ, ಲಕ್ಷ್ಮಿ ಗ. ಲ.' ಎಂಬೀ ಪಲ್ಲವಿಯನ್ನು ಎಡೆಬಿಡದೆ ರಾಗ ಎಳೆದು ಬಾಯಿತುಂಬಾ ಹಾಡಿ, ಸುತ್ತುಮುತ್ತಲಿನ ಹಕ್ಕಿಗಳ ಕಲರವ ಪ್ರವಾಹಕ್ಕೆ ತಮ್ಮ ಉಪನದಿಗಳನ್ನೂ ಸೇರಿಸುತ್ತಿರುವುದನ್ನು ದೂಮನು ತನ್ನ ಕೆಲಸ ಮರೆತು ತಲ್ಲೀನನಾಗಿ ಕೇಳಿ ಪಶೇಲರಿಂದ ಬೈಗಳ ಜಡಿಮಳೆ ಸುರಿಸಿಕೊಂಡುದುಂಟು.

ಕಟ್ಟಿಗೆ ಕಡಿಯುತ್ತಿದ್ದ ಕೊಡಲಿಯ ಆ ದೊಡ್ಡ ಶಬ್ದವನ್ನಾದರೂ ಮಕ್ಕಳ ಬಳಪದ ಕರಕರ ಶಬ್ದವು ತುಸು ಹೊತ್ತು ಅಡಗಿಸಿ ದೂಮನನ್ನು ತಟಸ್ಥನನ್ನಾಗಿ ಮಾಡಿ ಬಿಡುತ್ತಿದ್ದ ಸಂದರ್ಭವು ಒಂದೆರಡಲ್ಲ. ಕೂಲಿ ದೂಮನಿಗೆ ತನ್ನ ಮಗ ಕೊರಗನನ್ನು ಶಾಲೆಗೆ ಕಳುಹಿಸಿ, ಅವನಿಂದ 'ಅಂಬುಜಾನನೆ' ಪದ್ಯವನ್ನು ಕಿವಿ ತುಂಬಾ ಕೇಳಿ, ಜನ್ಮಸಾರ್ಥಕಮಾಡಿ

ಕೊಳ್ಳಬೇಕೆಂಬ ಆತುರವು ಬಲವತ್ತರವಾಗಿತ್ತು. ಆದರೆ "ನಿನ್ನ ಮಗನು ಇನ್ನು ಮುಂದೆ ನಮ್ಮ ದನಕಾಯಲು ಕೂತುಕೊಳ್ಳಬೇಕು" ಎಂದು ನಂದ ಪ್ಪಾಳ್ವರು ಮೊದಲೇ ತಮ್ಮ ನಿರ್ಧಾರ ಸೂತ್ರದಿಂದ ಕೊರಗನನ್ನು ಬಂಧಿಸಿ ದುದರಿಂದ, ಅದನ್ನು ಮೀರಿ ನಡೆಯುವ ಧೈರ್ಯವು ದೂಮನಿಗಿರಲಿಲ್ಲ. ಆದರೂ 'ಮರಿಗಾಂಧಿ' ನಾರಾಯಣನ ಒತ್ತಾಯದಿಂದ ಹೇಗೂ ಪಠೇಲರ ಅನುಜ್ಞೆಯನ್ನು ಪಡೆದು ಕೊರಗನನ್ನು 'ಲೇಬರ್' ಶಾಲೆಗೆ ಕಳುಹಿಸಿದ್ದನು. ಕೊರಗನಾದರೊ ಪರೀಕ್ಷೆಯ ಮೆಟ್ಟಲುಗಳನ್ನು ಕ್ರಮ ಪ್ರಕಾರವಾಗಿ ಏರುತ್ತಾ VIIIನೇ ದರ್ಜೆಯ 'ಸರ್ಟಿಫಿಕೇಟ'ನ್ನು ಪಡೆದು ಅಧ್ಯಾಪಕ ನಾಗಿ ಕೊರಗಮಾಸ್ತರನೆಂದು ಕಿರಿಯೂರಿನ ಜನರೆಲ್ಲರ ಗಮನಕ್ಕೆ ಬಂದಿ ದ್ದನು. ಕಿರಿಹಳ್ಳಿಯಲ್ಲಿ ಕೊರಗನೆಂದರೆ ಪ್ರತಿಯೊಬ್ಬರ ಆಕರ್ಷಣ ಮೂರ್ತಿ! ಕೊರಗನು ನಡೆಯುವ ರೀತಿ, ಮಾತಾಡುವ ಕ್ರಮ, ಇವೆಲ್ಲವೂ ಕಿರಿಹಳ್ಳಿಯವರಿಗೆ ಅಂಕುಡೊಂಕಾಗಿ ತೋರುತ್ತಿದ್ದವು. ಆತನು ಶಾಲಾ ಪುಸ್ತಕಗಳನ್ನು ಹಿಡಿದುಕೊಂಡು ಮನೆಯಿಂದ ಹೊರಟನೆಂದರೆ, ಮನೆ ಯಿಂದ ಶಾಲೆಯ ವರೆಗಿನ ರಾಜರಸ್ತೆಯಲ್ಲಿ, ಜನರೆಲ್ಲರೂ ಮೊಹರಮಿನ ಹುಲಿವೇಶವನ್ನು ನೋಡುವಷ್ಟು ಆತುರದಿಂದ ಅವನನ್ನು ನೋಡುತ್ತಿ ದ್ದರು. ಹೊಲೆಯರ ರೀತಿನೀತಿಗಳ ಮೇರೆಯನ್ನು ಮೀರಿ ಹೊರ ಕಾಲಿಟ್ಟಿ ರುವನೆಂದು ಎಲ್ಲಿ ತನ್ನ ಮೇಲೆ ಉಚ್ಚವರ್ಣೀಯರ ಕ್ರೂರ ದೃಷ್ಟಿಯು ಬೀಳುವುದೋ ಎಂಬ ಹೆದರಿಕೆಯಿಂದ ಕೊರಗನು ಎಷ್ಟೊಂದು ಬಗ್ಗಿ ನಡೆದರೂ, ಅವನ ಆ ನಮ್ರಭಾವನೆಯೇ ಕಿರಿಹಳ್ಳಿಯವರಿಗೊಂದು ವಿಕಾರವರ್ತನೆಯಾಗಿ ತೋರುತಿತ್ತು ಹೊಲೆಯ ಕೊರಗನು 'ಮರಿಗಾಂಧಿ' ನಾರಾಯಣನ ಬೋಧನೆಯಿಂದ, ಶುದ್ಧ ಖಾದಿವಾಲನಾಗಿ ಹೋಗಿದ್ದುದು ಮಾತ್ರವಲ್ಲದೆ, ತನ್ನ ದೇಶಾಭಿಮಾನದ ಹೆಗ್ಗಳಿಕೆಯನ್ನು ಅನೇಕರಿದಿರು ತೋರಿಸಿಕೊಂಡದ್ದೂ ಉಂಟು.

ಹೀಗೆ ತನ್ನ ಜೀವನ ವ್ಯವಹಾರದಲ್ಲಿ ಸರ್ವವಿಧದಿಂದಲೂ ಮೇಲ್ಜಾ ತಿಯವರೊಡನೆ ಸರಿಮಿಗಿಲೆಂಬಂತಿರುವ ಹೊಲೆಯ ಕೊರಗನೆಂದರೆ, ನವಿ ಲಿನ ರೂಪು ಬರಬೇಕೆಂದು ಬಣ್ಣದ ಗರಿಗಳನ್ನು ಅಂಟಿಸಿಕೊಂಡ ಕಾಗೆ; ಹುಲಿಯ ಬಣ್ಣ ಬರಬೇಕೆಂದು ಮೈಸುಟ್ಟುಕೊಂಡ ನರಿಯೆಂದೇ ಕಿರಿ ಹಳ್ಳಿಯವರ ಭಾವನೆ. ತನಗಾಗಿ ಪ್ರತ್ಯೇಕವಿರಿಸಿದ್ದ ಆ ಸಂಕುಚಿತ

ವಾತಾವರಣದ ಗಡಿಯನ್ನು ದಾಟಿದ ಮಹಾಪರಾಧಿಯೆಂದೇ ಅವರ ನಂಬಿಕೆ. ಎಲ್ಲಾ ಹೊಲೆಯರೂ ಹಾರೆಗುದ್ದಲಿಗಳನ್ನು ಹಿಡಿದುಕೊಂಡು ಕಲ್ಲು ಕಡಿಯಲು ಹೋಗುತ್ತಿರುವಾಗ, ಕೊರಗನೊಬ್ಬನ ಕೈಯಲ್ಲಿರುವುದು ಪುಸ್ತಕಗಳೆಂದರೆ ಇಲ್ಲಿ ಜಾತಿ ಧರ್ಮವೇನುಳಿಯಿತು? ಸಾಯಂಕಾಲದಲ್ಲಿ ತಲೆಗೆಡುವಂತೆ ಕುಡಿದು ತಲೆ ಬಡಿದುಕೊಳ್ಳುತ್ತಿರುವ ಹೊಲೆಯರ ಆ ವಿನೋದ ದೃಶ್ಯವನ್ನು ಕಣ್ಣು ತುಂಬಾ ನೋಡಿ ನಯನಾನಂದವನ್ನು ಹೊಂದುತ್ತಾ 'ಹೊಲೆಯರಿಲ್ಲದಿದ್ದರೆ ಲೋಕವೇ ನೀರಸ'ವೆಂಬ ಕೃತಜ್ಞತೆಯನ್ನು ಅಸ್ಪೃಶ್ಯರ ವಂಶಕ್ಕೆನೇ ಅರ್ಪಿಸುವ ಆ ಸಮಯದಲ್ಲಿ 'ಹೊಲೆಯರಾದರೂ ಇಂಥಾ ವಿಕಾರಾನಂದವನ್ನು ಹುಟ್ಟಿಸುವ ಗೊಂಬೆಗಳಾಗಿಯೇ ಬಹುಕಾಲ ಇರಲಾರರೆಂಬುದನ್ನು ಸೂಚಿಸುವ ಮುಂಗುರುತಾಗಿ ಬಿಳಿ ಖದ್ದರಿನ ಕೊರಗನೊಬ್ಬನು ಅವರ ಮುಂದೆ ಸುಳಿದನೆಂದರೆ ಸವರ್ಣೀಯರೆಷ್ಟು ಹೌಹಾರಿಬೀಳಲಿಕ್ಕಿಲ್ಲ? 'ಹೊಟೆಲಿ'ನಲ್ಲಿ ಕಾಫಿ ಕುಡಿಯುತ್ತಿರುವಾಗ, ಅದೇ ಹೊಟೆಲಿನಲ್ಲಿ ಜಗಲಿಯ ಒಂದು ಮೂಲೆಯಲ್ಲಿ ಗೆರಟೆಯಲ್ಲಿಯೇ ಅದರೂ ಕೊರಗನಂತಹ ಒಬ್ಬ ಹೊಲೆಯನೂ ಕಾಫಿ ಕುಡಿಯುವುದೆಂದರೆ, ಈ ಅಪಮಾನವನ್ನು ಅವರು ಸಹಿಸುವ್ರದಾದರೂ ಹೇಗೆ? ಹಂಸ ಪಕ್ಷಿಯ ಹಕ್ಕಿನದಾದ ಆ ಬಿಳೀ ಹಾಲಿಗೆ ಕಾಗೆಯೂ ಕೊಕ್ಕು ಹಾಕಿದಂತಾಗಲಿಲ್ಲವೇ? ಮದ್ಯಪಾನ ವೀರರೆಂಬ ಹೊಲೆಯ ಜಾತಿ ಬಿರುದನ್ನೇ ತಿರಸ್ಕರಿಸಿದ ಕೊರಗನು ಧರ್ಮಭ್ರಷ್ಟನಲ್ಲದೆ ಮತ್ತಾರು? ದನ ಕಾಯುವ ಯೋಗ್ಯತೆಯ ಸರ್ಟಿಫಿಕೇಟನ್ನು ಪಟೇಲರಿಂದ ಮೊದಲೇ ಪಡಕೊಂಡಿದ್ದ ಕೊರಗನು ಈಗ ಎಂಟನೇ ದರ್ಜೆಯ 'ಸರ್ಟಿಫಿಕೇಟ'ನ್ನು ಹೊಂದಿ, ಕುರ್ಚಿಯಲ್ಲಿ ಕುಳಿತುಕೊಳ್ಳುವ ಉಪಾಧ್ಯಾಯನಾಗುವುದೆಂದರೆ ಇನ್ನುಳಿದುದೇನು? ಹೀಗೆ ಎಲ್ಲಾ ರೀತಿಯಿಂದಲೂ ಅಸ್ಪೃಶ್ಯರ ಪಾಳಯವನ್ನು ಬಿಟ್ಟು ಉಚ್ಚವರ್ಣೀಯರ ದಂಡಿನಕಡೆಗೆ ಧಾಳಿಯಿಡುವ ಹೊಲೆಯ ಕೊರಗನೆಂದರೆ, ಅಸ್ಪೃಶ್ಯರು ಇನ್ನು ಮುಂದೆ ಸ್ವಾತಂತ್ರ್ಯಕ್ಕಾಗಿ ಹೂಡಬಹುದಾದ ಆ ಘೋರ ಯುದ್ಧಕ್ಕೆ ಆಹ್ವಾನ ಕೊಡಲು ಬಂದ ಒಬ್ಬ ಶೂರ ಸಿಪಾಯಿಯೇ ಅಲ್ಲವೇ? ಇಂಥಾ ಕೊರಗನನ್ನು ಮೇಲ್ಜಾತಿಯವರೆಲ್ಲರೂ ಓರೆ ಕಣ್ಣಿನಿಂದಲೇ ನೋಡುತ್ತಿದ್ದರೆ ಅದರಲ್ಲಿ ಆಶ್ಚರ್ಯವೇನು?

೨

ಇಂದು ಪಠೇಲ ನಂದಪ್ಪಾಳ್ವರ ಮನೆಯಲ್ಲಿ ಪಂಚಾಯತಿಕೆಯ ಗದ್ದಲ. ಗುತ್ತಿನ ಶೆಟ್ಟರು, ಗ್ರಾಮದ ಪಠೆಲರು, ದೇವಸ್ಥಾನದ ಅರ್ಚಕ ಮುಕ್ಕಣ್ಣ ಭಟ್ಟರು, 'ಮರಿಗಾಂಧಿ' ನಾರಾಯಣ, ಹೊಲೆಯ ದೂಮ, ಕೊರಗ ಇವರೆಲ್ಲಾ ಚರ್ಚೆಯಲ್ಲಿ ಭಾಗಿಗಳಾಗಿದ್ದರು. ಅರ್ಚಕ ಮುಕ್ಕಣ್ಣ ಭಟ್ಟರನ್ನು ಕೊರಗನು ಮುಟ್ಟಿದನೆಂಬುದೇ ಚರ್ಚೆಯ ವಿಷಯ. 'ಕೊರಗನಲ್ಲಿ ಉಕ್ಕೇರುತ್ತಿದ್ದ ಅಹಂಭಾವವು ಇಂದು ಭಟ್ಟರನ್ನು ಮುಟ್ಟುವ ರೂಪದಲ್ಲಿ ಹೊರಬಿತ್ತು. ಪಠೇಲರು ಇದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಕೊಡದಿರಲಾರರು. ಈ ವಿನೋದವನ್ನೊಮ್ಮೆ ನೋಡಿ ಬಿಡುವ" ಎಂದು ಕಿರಿಹಳ್ಳಿಯ ಆಬಾಲ ವೃದ್ಧರೆಲ್ಲರೂ ಕಿಕ್ಕಿರಿದು ನೆರೆದು ಬಂದು ಗ್ರಾಮ ಚಾವಡಿಯಲ್ಲಿ ನುಗ್ಗಿ ನುಸಿಯುತ್ತಿದ್ದರು. ಕೊರಗನ ಕಡೆಯಿಂದ ವಾದಿಸಲು ಬಂದವನೆಂದರೆ 'ಮರಿಗಾಂಧಿ' ನಾರಾಯಣನೊಬ್ಬನೇ. "ಅಸ್ಪೃಶ್ಯರನ್ನು ಮುಟ್ಟಬೇಕು; ಖಾದಿ ಉಡಬೇಕು; ಮದ್ಯಪಾನ ಬಿಡಬೇಕು." ಎಂದೆಲ್ಲಾ ಕಾಲ ಅಕಾಲವೆನ್ನದೆ ಸಿಕ್ಕ ಸಿಕ್ಕವರಿಗೆಲ್ಲಾ ಎಡೆಬಿಡದೆ ಬೋಧಿಸುತ್ತಾ ಬಂದುದರಿಂದ ಕಿರಿಹಳ್ಳಿಯವರ ದೃಷ್ಟಿಯಲ್ಲಿ ಅವನೊಬ್ಬ 'ಅರೆ ಮರುಳ'ನಾಗಿ ಹೋಗಿದ್ದನು. ಗಾಂಧಿ ಟೊಪ್ಪಿಯನ್ನಿಟ್ಟು, ಕಿರಿಹಳ್ಳಿಯು ಅಸಹಕಾರ ಚಳವಳದ ಗಡಿಯಿಂದ ಸಂಪೂರ್ಣ ಹೊರಗಿಲ್ಲವೆಂಬುದನ್ನು ಮೊದಲು ತೋರಿಸಿಕೊಟ್ಟವನೇ ನಾರಾಯಣನಾಗಿರುವುದರಿಂದ, ಅವನಿಗೆ ಜನರು ಪರಿಹಾಸ್ಯವಾಗಿ ಇಟ್ಟ 'ಮರಿಗಾಂಧಿ'ಯೆಂಬ ವಿಕಟನಾಮವು ಜನಜನಿತವಾಯಿತು. ಕಿರಿಹಳ್ಳಿಯಲ್ಲಿ 'ಮರಿಗಾಂಧಿ' ಎಂದ ಮೇಲೆ ನಾರಾಯಣನೇ ಎಂಬುದನ್ನು ಬೇರೆ ಹೇಳಬೇಕಾಗಿರಲಿಲ್ಲ. ಹೀಗೆ ಶುದ್ಧ ರಾಷ್ಟ್ರಭಕ್ತನಾಗಿ ಹೋಗಿದ್ದ ನಾರಾಯಣನು, ತನ್ನ ದೇಶಾಭಿಮಾನವನ್ನು ತೋರಲೆಡೆಯುಳ್ಳ ಈ ಸುಸಂದರ್ಭವನ್ನು ಕಳೆದುಕೊಳ್ಳದೆ, ಇಂದು ಕೊರಗನ ವರ್ತನೆಯ ಸಮರ್ಥನೆಗಾಗಿ ಸೊಂಟಕಟ್ಟಿದ್ದನು.

"ಏನು ದೂಮ! ನಿನ್ನ ಮಗನು ನಿನ್ನೆ ಮುಕ್ಕಣ್ಣ ಭಟ್ಟರನ್ನು ಮುಟ್ಟಿಕೊಂಡೇ ನಡೆದನಂತೆ. ಏನವನಿಗೆ ಕಣ್ಣು ಕಾಣುವುದಿಲ್ಲವೋ? ಅಥವಾ ಮುಟ್ಟಿದರೆ ಏನಾಗುತ್ತದೆಂಬ ದರ್ಪವೋ? ಎಂದು ಪಠೇಲರು ರೋಷಮಿಶ್ರಿತವಾದ ಗಂಭೀರತೆಯೊಡನೆ ಪ್ರಶ್ನಿಸಿದರು.

"ದೇವರ ಅಪ್ಪಣೆ ಏನಾಗುತ್ತದೋ ಆದರಂತೆ ನಡಿಯಲು ನಾನು ಸಿದ್ಧನು ಖಾವಂದರು ಈ ದೀನ ಸೇವಕನನ್ನು ಯಾವ ರೀತಿಯಿಂದಾದರೂ ಉದ್ಧರಿಸಬೇಕೆಂದು ಬೇಡಿಕೊಳ್ಳುತ್ತೇನೆ." ಎಂದು ದೂಮನು ಜೊಗಸೆಯೊಡ್ಡಿ ಬೇಡಿಕೊಂಡನು.

"ಅದಿರಲಿ, ರಸ್ತೆಯಲ್ಲಿ ಹೋಗುವಾಗ ಮುಟ್ಟಿಕೊಂಡೇ ಹೋಗುವುದೆಂದರೆ ಇದರ ಅರ್ಥವೇನು? ಇದನ್ನು ಹೀಗೆಯೇ ಬಿಟ್ಟರೆ ಈ ಪೋರನು ಇನ್ನೇನು ಮಾಡಲಿಕ್ಕಿಲ್ಲ?" ಎನ್ನುತ್ತಾ ಪಟೇಲರು ಸಿಟ್ಟಿನಿಂದ ನಡುಗಹತ್ತಿದರು.

"ಸ್ವಾಮಿ! ನಾನು ಭಟ್ಟರನ್ನು ಬೇಕೆಂತ ಮುಟ್ಟಿದವನಲ್ಲ. ಆಗ ತಾನೆ ಬಂದ 'ನವಯುಗ' ಪತ್ರಿಕೆಯನ್ನು ಓದಿಕೊಂಡು ಹೋಗುತ್ತಿರುವಾಗ, ಭಟ್ಟರು ಇದಿರಿಗೆ ಬರುತ್ತಿದ್ದುದನ್ನು ನೋಡದೆ ಮೋಸವಾಗಿ ಹೋಯಿತು. ಆದರೆ ನನ್ನನ್ನು ಅವರೂ ನೋಡದಿರುವುದಕ್ಕೆ ಕಾರಣವೇನೋ ನನಗೆ ಗೊತ್ತಿಲ್ಲ." ಎಂದು ಕೊರಗನು ತನ್ನ ನಿರಪರಾಧಿತ್ವವನ್ನು ರುಜುಪಡಿಸಲೆತ್ನಿಸಿದನು.

"ಹೇಗೆ ಪಟೇಲರೇ! ಇವನ ಮಾತಿನಿಂದ ನಾನೇ ಇವನಿಗೆ ಹಾದಿ ಬಿಟ್ಟುಕೊಡಬೇಕಿತ್ತೆಂದು ಅರ್ಥವಾಗುತ್ತದೆ! ರಸ್ತೆಯಲ್ಲಿ ಇನ್ನು ನಡಿಯಲಿಕ್ಕಿಲ್ಲವಪ್ಪಾ!' ಎನ್ನುತ್ತಾ ಮುಕ್ಕಣ್ಣ ಭಟ್ಟರು ವ್ಯಂಗ್ಯವಾಗಿ ಗಹಗಹಿಸಿ ನಕ್ಕು ಪಟೇಲರನ್ನೊಮ್ಮೆ, ಕೊರಗನನ್ನೊಮ್ಮೆ ದಿಟ್ಟಿಸಿದರು.

"ಏನು! ಓದುವಾಗ ತೋರಲಿಲ್ಲವೋ? ನೀನು ದೊಡ್ಡ ಧೊರೆಯ ಮಗ! 'ನವಯುಗ' ಓದುತ್ತೀಯೆಂದು ಪೂಜೆಗೆ ಹೋಗುವ ಭಟ್ಟರು ಹಾದಿ ಬಿಟ್ಟು ಕೊಡಬೇಕಿತ್ತೆಂದು ಕಾಣುತ್ತದೆ! ನಿನ್ನ 'ಸಾಮಿ ಗೀಮಿ' ಎಂಬ ದರ್ಪವನ್ನು ಇಳಿಸಲಿಕ್ಕಾಗುತ್ತದೋ ಇಲ್ಲವೋ ನೋಡುತ್ತೇನೆ!" ಎಂದು ಪಟೇಲರು ಕ್ರೋಧೋನ್ಮತ್ತರಾಗಿ ಗದರಿಸಿದರು.

ಈ ಮಧ್ಯೆ ಮರಿಗಾಂಧಿ ನಾರಾಯಣನು ಅಸ್ಪೃಶ್ಯತೆಯ ಅನ್ಯಾಯ, ಕೀಳಜಾತಿಯವರನ್ನು ಸಹೋದರರಂತೆ ಕಾಣಬೇಕಾದ ಆವಶ್ಯಕತೆ, ಇವುಗಳ ಕುರಿತೆಲ್ಲಾ ದೀರ್ಘ 'ಪೇರಿಂಗ್' ಮಾಡುತ್ತಲೇ ಇದ್ದನು. ಆದರೆ ಇದು ಬೋಂಬು ಸಿಡಿತದ ಇದಿರಿನ ಕೈಚಪ್ಪಾಳೆಯಂತೆ, ಪಟೇಲರ ಆ

ಘರ್ಜನೆ ತರ್ಜನೆಯೊಳಗೆ ಅಡಗಿ ಹೋಗಿ ಅರಣ್ಯರೋದನವಾಗುತ್ತಿತ್ತು. ನಾರಾಯಣನೆಂದರೆ, ಗಾಂಧಿ ಚಳವಳವೆಂಬ ಮಹಾ ಮಾರಿಗೆ, ಕೆರಿಹಳ್ಳಿಯಿಂದ ಹರಸಿಬಿಟ್ಟ ಕುರಿಯೆಂದೇ ಅಲ್ಲಿಯವರ ಭಾವನೆಯಾಗಿದ್ದುದರಿಂದ ಅವನೆಷ್ಟು ಆಧಾರ ಕೊಟ್ಟು ತರ್ಕಿಸಿದರೂ ಅದಕ್ಕೆ ಕಿವಿಕೊಟ್ಟು ಕೇಳುವ ಅವಶ್ಯಕತೆಯನ್ನು ಸಭಿಕರಾರೂ ಕಾಣಲಿಲ್ಲ. ಕೊರಗನು ಮಾಡಿದ ಅಂತಹ ಅಪರಾಧವಾದರೂ ಏನು? ಮೊನ್ನೆ ಉತ್ಸವದ ಸಮಯದಲ್ಲಿ ಹುಚ್ಚನೊಬ್ಬನು ಜನರನ್ನು ಓಡಿಸುತ್ತಾ ತಿವಿಯುತ್ತಿದ್ದಾನೆಂಬ ಸುಳ್ಳು ವರ್ತಮಾನವು ಹಬ್ಬಿ ಎಲ್ಲರೂ ಜೀವದಾಸೆಯಿಂದ ಓಡುತ್ತಿದ್ದಾಗ ಉಸಿರ, ಕಟ್ಟಿಓಡುತ್ತಿರುವ ಇದೇ ಮುಕ್ಕಣ್ಣ ಭಟ್ಟರನ್ನು ಹೊಲೆಯ ದಾಂಡಿಗುನೊಬ್ಬನು ಓಡುವಭರದಲ್ಲಿ ಉರುಳಿಸಿ ಎದೆಮೆಟ್ಟಿಕೊಂಡೇ ಓಡಿರಲಿಲ್ಲವೇ? ಹುಚ್ಚನೆಲ್ಲಿ ಬಂದು ಬಿಡುವನೋ ಎಂಬ ಬೆದರಿಕೆಯಿಂದ ದಡಬಡನೆ ಎದ್ದು, ಹೊಲೆಯನ ಪಾದಧೂಳನ್ನು ಸಮೇತ ಒರಸದೆ, ಓಡಿಹೋಗಿ ಬಾಗಿಲು ಹಾಕಿ ಒಳಗೆ ಕೂತುಕೊಂಡ ಭಟ್ಟರನ್ನು ನೋಡದವರಾರು? ಇದೇ ಪಟೇಲ ಸಂದ್ಯಪ್ಪಾಳ್ವರು, ಗಟ್ಟದ ಕಾಫಿ ತೋಟಕ್ಕೆ ಆಳಾಗಿ ಕಳುಹಿಸಿದ ಹೊಲೆಯ ಅಂಗರನು ಮೂರು ಮೂರು ಸಾರಿಯೂ ಹೇಳದೆ ಓಡಿ ಬಂದನೆಂಬ ಸಿಟ್ಟಿನಿಂದ ಆತನನ್ನು ಹಿಡಿತರಿಸಿ, ತಾನೇ ಕೈತುಂಬಾ ಗುದ್ದಿ, ಸಿಟ್ಟಿನ ಭರದಲ್ಲಿ ಘರ್ಜಿಸುತ್ತಾ ಅಂಗಳದಿಂದ ಚಾವಡಿಗೂ ಚಾವಡಿಯಿಂದ ಅಂಗಳಕ್ಕೂ ಓಡಾಡಲಿಲ್ಲವೇ? ಆದರೆ ಇವನ್ನೆಲ್ಲಾ ಅಲ್ಲಿ ಹೇಳುವವರಾರು? ಒಂದೊಮ್ಮೆಗೆ ಅಸಹಾಯಶೂರನಾದ ನಾರಾಯಣನು, ಈ ಮಾತುಗಳಿಂದ ಎಚ್ಚರಿಸಲು ಪ್ರಯತ್ನಪಟ್ಟರೂ, ಆಪದ್ಧರ್ಮವಾಗಿ ಸ್ವೀಕರಿಸಿದ ಅಂದಿನ ನಡತೆಯನ್ನು ಸದಾ ಸರ್ವದಾ ಅನುಕರಿಸುವಷ್ಟು ಅವೀಕಿಗಳಾಗಲು, ಪಟೇಲರಾಗಲಿ ಭಟ್ಟರಾಗಲಿ ಒಪ್ಪುವರೇ? ಹೀಗಿದ್ದ ಮೇಲೆ ಕೊರಗನನ್ನೊಮ್ಮೆ ಕ್ಷಮಿಸಿದರೆ, ಅವನು ಇಷ್ಟರಿಂದಲೇ ಉಬ್ಬಿ ಹೋಗಿ, ಇದಕ್ಕಿಂತಲೂ ದೊಡ್ಡ ಕಾರ್ಯಗಳಿಗೆ ಕೈಹಾಕಲಿಕ್ಕಿಲ್ಲವೇ? ಆದ್ದರಿಂದ ಹೊಲೆಯ ಕೊರಗನು, ಈ ತಪ್ಪಿಗಾಗಿ ಎರಡು ವರಹಗಳನ್ನು ದೇವಸ್ಥಾನದ ಡಬ್ಬಿಗೆ ಹಾಕುವಂತೆ ಮಾಡಿ, ತನ್ನ ಮಗಳ ಮದುವೆಯ ದಿವಸ ಖಾಲಿಯಾದ ಆ ಡಬ್ಬಿಯನ್ನು ಬೇಗ ತುಂಬಿಸಿ ಬಿಡಬೇಕೆಂದು ನೆನಸಿ, ಪಟೇಲರು ಹಾಗೆಯೇ ತೀರ್ಪನ್ನು ಕೊಟ್ಟುಬಿಟ್ಟರು.

ದೂಮನು ಕಂಗಾಲಾಗಿ ಅಷ್ಟು ಹಣವನ್ನು ತೆರುವ ಸಾಮರ್ಥ್ಯವು ತನಗಿಲ್ಲವೆಂದೂ, ಏನಾದರೂ ಕಡಿಮೆ ಮಾಡಿ ಬಡವರನ್ನು ಉದ್ಧರಿಸುವ ಕರುಣೆಯನ್ನಿಡಬೇಕೆಂದೂ, ಅಡ್ಡ ಬಿದ್ದು ಬೇಡಿಕೊಳ್ಳುತ್ತಿದ್ದಾನೆ. ಪಟೇಲರು ಅದಕ್ಕಾಗಿ ಭಟ್ಟರ ಮುಖವನ್ನು ನೋಡುತ್ತಿದ್ದಾರೆ. ಭಟ್ಟರು ಕಡಿವಾಣವನ್ನು ಸ್ವಲ್ಪವೂ ಸಡಲಿಸಲು ಇಷ್ಟವಿಲ್ಲದೆ, ಅಸಮ್ಮತಿಯ ಮುಖ ಮುದ್ರೆಯಿಂದಿದ್ದಾರೆ. ಅಷ್ಟರಲ್ಲಿ ಅವರ ಹಿರಿಯ ಮಗನು ಉಸಿರು ಕಟ್ಟಿ ಓಡಿ ಬಂದು, ಭಟ್ಟರೊಡನೆ ಅವಸರವಸರದಿಂದ ಏನನ್ನೊ ಹೇಳಲು ಹವಣಿಸಿದನು. ದಮ್ಮು ಕಟ್ಟಿ ಓಡಿ ಬಂದುದರಿಂದ, ಸಂಗತಿಯನ್ನು ಸರಾಗವಾಗಿ ಹೇಳಲು ಅವನಿಂದಾಗುತ್ತಿರಲಿಲ್ಲ. ಭಟ್ಟರು ಗಾಬರಿಯಿಂದ ಎದ್ದು, 'ಏನು? ಏನಾಯಿತು?' ಎನ್ನುತ್ತಾ ಮನೆಯ ಕಡೆಗೆ ಓಡಲು ನೋಡಿದರು. "ಮಗ....ಅನಂತ....ಬಾವಿಗೆ" ಎಂಬಷ್ಟು ಕಿವಿಗೆ ಬೀಳುತ್ತಲೇ, ಭಟ್ಟರು ಥಟ್ಟನೆ ಕೆಳಕ್ಕೆ ಹಾರಿ ಓಡತೊಡಗಿದರು. ಆ ಕೂಡಲೇ ಅಲ್ಲಿ ನೆರದಿದ್ದವರೆಲ್ಲರೂ ಮುಕ್ಕಣ್ಣ ಭಟ್ಟರ ಮನೆಗೆ ಗಡಿಬಿಡಿಯಿಂದ ಓಡಿದರು. ಅಲ್ಲಿ ಹೋಗಿ ನೋಡುವಾಗ ಭಟ್ಟರ ಕಿರಿಯ ಮಗುವನ್ನು ಕಂಬಳಿಯೊಂದರಲ್ಲಿ ಮಲಗಿಸಿ, ಮೈಗೆ ಒತ್ತಡಗಳನ್ನು ಕೊಡುತ್ತಲೂ ಕೈಕಾಲು ತಿಕ್ಕುತ್ತಲೂ ಇದ್ದರು. ಹತ್ತಿರದಲ್ಲಿಯೇ ಹೊಲೆಯ ತಬುರನ್ನು ತಲೆ ಮೈಯೆಲ್ಲಾ ಒದ್ದೆ ಮಾಡಿಕೊಂಡು ನಿಂತಿದ್ದನು. ಭಟ್ಟರು ಒಡನೆಯೇ ಗುಂಪಿನ ಒಳಕ್ಕೆ ನುಗ್ಗಿ ಮಗುವು ಕಣ್ಣು ಬಿಟ್ಟು ಮಾತಾಡಲು ಪ್ರಯತಿಸುವುದನ್ನು ಕಂಡು ಜೀವಬಂದಂತಾಗಿ, ನಡೆದ ವಿದ್ಯಮಾನವನ್ನು ವಿಚಾರಿಸತೊಡಗಿದರು.

ಭಟ್ಟರ ಮಕ್ಕಳು ಕಿರಿಹಳ್ಳಿಯ ಅಗ್ರಹಾರದ ಬಾವಿಯ ಬಳಿಯಲ್ಲಿ ಆಡುತ್ತಿದ್ದಾಗ ಈ ಮಗುವು ಫಕ್ಕನೆ ಕಾಲು ಜಾರಿ ಬಾವಿಯೊಳಕ್ಕೆ ಬಿತ್ತು. ಆಗ ಮನೆಯವರ ಬೊಬ್ಬೆ ಕೇಳಿ ಸುತ್ತುಮುತ್ತಲಿನ ಬ್ರಾಹ್ಮಣರೆಲ್ಲಾ ಓಡಿ ಬಂದು ಪಿಳಪಿಳನೆ ನೋಡುತ್ತಿದ್ದರೇ ಹೊರತು ಆಳವಾದ ಬಾವಿಗೆ ಹಾರಲು ಯಾರೂ ಧೈರ್ಯ ಪಡಲಿಲ್ಲ. ಈ ಬೊಬ್ಬೆಯನ್ನು ಕೇಳಿ ಭಟ್ಟರ ಗದ್ದೆ ಉಳುತ್ತಿದ್ದ ಹೊಲೆಯ ತಬುರನು ಓಡಿ ಬಂದನು. 'ದಮ್ಮಯ್ಯಾ! ಮಗುವನೊಮ್ಮೆ ಬದುಕಿಸಿರಿ! ನನ್ನ ಮಗುವನ್ನು!' ಎಂದು ಬೊಬ್ಬಿ

ಡುತ್ತಾ ಬೇಡಿಕೊಳ್ಳುತ್ತಿರುವ ಭಟ್ಟರ ಹೆಂಡತಿಯ ಮೊರೆಯನ್ನು ಕೇಳಿ ತಡೆಯಲಾರದೆ ಹಿಂದು ಮುಂದು ನೋಡದೆ ಧೊಪ್ಪನೆ ಬಾವಿಗೆ ಹಾರಿದನು. ಎರಡೆರಡು ಸಲ ನೆಲ ಹಿಡಿದು ಅರೆಜೀವದಿಂದಿದ್ದ ಮಗುವನ್ನು ಹೇಗೂ ಮೇಲೆ ತಂದನು. ಅಂತೂ ಹೊಲೆಯ ತಬುರನ ಸುದೈವದಿಂದ, ಆವನಿಗೆ ಸ್ವರ್ಗದಷ್ಟು ದೂರವಾಗಿದ್ದ ಆ ಬಾವಿಯಲ್ಲೊಮ್ಮೆ ಮುಳುಗಿ ಜನ್ಮ ಜನ್ಮಾಂತರದ ಪಾಪವನ್ನು ತೊಳೆದುಕೊಳ್ಳುವ ಸಂದರ್ಭವೊಂದು ಒದಗಿತು!

ಇತ್ತ ಆಕಸ್ಮಾತ್ ಸಿಡಿಲು ಬಡಿದಂತೆ ಚೆದರಿದ, ಕೊರಗನ ಅಪರಾಧ ವಿಚಾರಣಾ ಸಭೆಯು ಕಡೆಯ ತೀರ್ಮಾನವನ್ನು ಕೊಡಲು ಮತ್ತೆ ಸೇರಿದುದೂ ಇಲ್ಲ; 'ಅಪರಾಧಿಯಾರೆ'ಂದು ನಿಶ್ಚಯಿಸಿದುದೂ ಇಲ್ಲ.

—ಎಮ್. ವಿಟ್ಠಲ ಹೆಗ್ಡೆ.

(ನವಯುಗ 1929)

# ೮. ಅಳಿಯನ ಹುಡುಕಾಟ

—೦–೦-೦—

ಯಾವ ಕಾಟವಾದರೂ ಆದೀತು; ಅಳಿಯನ ಬೇಟೆಯ ಕಾಟ ಬೇಡ. ಹಾಗಂತ ಅಳಿಯಂದಿರ ಬೆಳೆಗೆ ಬರ ಬಂದಿರುವುದೆಂದೇನೂ ಇಲ್ಲ. ಎಲ್ಲೆಲ್ಲಿಯೂ ಅವರು ಧಾರಳವಾಗಿ ಸಿಗುತ್ತಾರೆ. ಇಲ್ಲವಾದರೆ ನಮ್ಮ ಹೆಚ್ಚಿನ ಹುಡುಗಿಯರೆಲ್ಲಾ ಮದುವೆಯಾಗದೆ ಸತ್ತು ಬ್ರಹ್ಮರಕ್ಕಸಿಯ ರಾಗುವ ಭೀಕರಾವಸ್ಥೆಗೊಳಗಾಗಬೇಕಿತ್ತು. ಹಾಗೇನೂ ಆಗದೆ ಪ್ರತಿ ಯೊಬ್ಬ ರಮೆಗೆ ರಮೇಶನೊಬ್ಬನು ಗಂಟುಬಿದ್ದೇಬಿಡುವನು. ಅವರೊಮ್ಮೆ ಜತೆಯಾದರೆಂದ ಮೇಲೆ ಹೇಗಾದರೂ ಮಾಡಿ ತಮ್ಮಿಂದ ಕೂಡಿದಷ್ಟು ಮಟ್ಟಿಗೆ ಚೆನ್ನಾಗಿಯೇ ಸಂಸಾರನೊಗವನ್ನು ಹೊತ್ತು ನಡೆಯುವರು. ಆದರೆ ಮೊದಲು ಆರಿಸಿ ಜತೆಮಾಡುವುದೇ ಬಹುಕಷ್ಟ ಕೆಲಸ. ಇದರಲ್ಲೂ ಕೆಲಮಟ್ಟಿಗೆ ಸಮಾಧಾನ ವಿಷಯವೆಂದರೆ ಅಳಿಯಂದಿರು ಕ್ರಯಕೊಟ್ಟರೆ ಮಾರಸಿಗುವುದು. ಎಂತಹ ಸ್ವಾಭಿಮಾನಿಯಾದರೂ ಮಾರಲ್ಪಡಲೆಳಸದ ಅಳಿಯನಾದರೂ ಇರುವುದಿಲ್ಲ. ನೆಟ್ಟಗೆ ಮಾರ್ಕೆಟಿಗೆ ನಡೆದು, ಮಾರುವ ಮಾಲಾಗಿ ಅಂಗಡಿಯ ಗಾಜಿನ ಕೇಸಿನೊಳಗೆ ಕೂರುವ, ಏಲಂ ಹಾಕಿಸಿ ಕೊಳ್ಳಲು ಹಾತೊರೆಯುವ ಅಳಿಯಂದಿರೇ ಬಹಳ. ಆದರೂ ತೊಡಕಿನ ವಿಷಯವೆಂದರೆ. ಈ ಮಾಲುಗಳನ್ನೆಲ್ಲಾ ಒಂದೆಡೆ ಒಟ್ಟು ಕೂಡಿಸಿ ಯೋಗ್ಯತೆ ಪ್ರಕಾರ ವಿಂಗಡಿಸಿ, ಬೆಲೆವಾರು ಚೀಟು ಹಚ್ಚಿ ಪಟ್ಟಿ ಮಾಡಿಟ್ಟು, ಒಬ್ಬನು ತನ್ನ ಮನೆಯಲ್ಲೇ ಕುಳಿತು ಪಟ್ಟಿಯನ್ನು ತರಿಸಿ, ಜುವೆಲರಿಮಾರ್ಟಿನ ಆಭರಣಪಟ್ಟಿ ನೋಡಿ ತನ್ನ ಹೆಂಡತಿಗೆ ಕಂಠಹಾರ ವನ್ನೋ ಸೊಂಟಪಟ್ಟಿಯನ್ನೋ ಆರಿಸುವಂತೆ ತನಗೆ ಬೇಕಾದ ರೀತಿಯ ಅಳಿಯನನ್ನು ಚುನಾಯಿಸುವ ಅನುಕೂಲತೆ ಮಾಡಿಕೊಟ್ಟವರಿಲ್ಲ. ಈಗಣ ರಾವ್ ಎಂಡ್ ಕೋ ಲಿಮಿಟಡ್, ಯುನಿವರ್ಸಲ್ ಸಪ್ಲೈ ಏಜೆನ್ಸಿ, ಆಲ್ ವರ್ಲ್ಡ್ ಎಂಪೋರಿಯಮ್ ಎಂಬ ನಾನಾ ಸಂಸ್ಥೆಗಳ ಸಂಘಟಿತ ವ್ಯಾಪಾರ ವಹಿವಾಟಿನಿಂದ, ಮೋಟರ್‌ಕಾರು, ಮದ್ದು, ಕೋವಿ, ಮಂಚ, ತಲೆದಿಂಬು, ಗ್ರಮಫೋನು, ಸುಗಂಧ ದ್ರವ್ಯ,

ಪುಸ್ತಕವೇ ಮೊದಲಾದ, ಅಶನ, ವಸನ, ಶಯನ, ಆಟ, ಕೂಟ, ಪಾಠ, ವಿನೋದ, ವಿಲಾಸ, ವಿಹಾರಾನುಕೂಲತೆಯ ವಿಧ ವಿಧ ಫೇಶನು, ಫೇನ್ಸಿಯ ಎಂತಹ ವಸ್ತುವಾದರೂ ಒಂದೆಡೆಯೇ ದೊರೆಯುವ ವ್ಯವಸ್ಥೆಯನ್ನೆಲ್ಲಾ ನೋಡಿದರೆ ಎಂಥವನಾದರೂ ಒಮ್ಮೆ ಬೆರಗುಗೊಳ್ಳಬೇಕು. ಆದರೆ ಇವುಗಳಲ್ಲೂ ಅಳಿಯಂದಿರು ಮಾತ್ರ ದೊರೆಯುವುದಿಲ್ಲ. ಜೀವನದ ಒಂದು ಅನುಕೂಲತೆಯನ್ನಾದರೂ ಬಿಡದೆ ಸಂಗ್ರಹಿಸಿಕೊಡುವ ಸಾಹಸಿಗಳಾದ ಈ ಕಂಪೆನಿಯವರ ಸೂಕ್ಷ್ಮ ದೃಷ್ಟಿಗೆ ಈ ವಿಚಾರವೇಕೆ ಬಿದ್ದಿರುವುದಿಲ್ಲೆಂಬುದೇ ವಿಚಿತ್ರ. ಇದರ ವಿಷಯದಲ್ಲಿ ಹೆಚ್ಚಿನ ತೊಂದರೆ ಕೂಡ ಇರುವುದಿಲ್ಲ. ಕೆಟಲೋಗೊಂದನ್ನು ಪ್ರಿಂಟ್ ಮಾಡಿಬಿಡುವುದೊಂದು ಕೆಲಸ ಮಾಡಿಬಿಟ್ಟರೆ ಸರಿ. ಅದರಲ್ಲಿ ಬೇರೆ ಬೇರೆ ಯುವಕರ ಭಾವಚಿತ್ರಗಳನ್ನಿತ್ತು, ಅವುಗಳಡಿಯಲ್ಲಿ, ರೂಪಚಿತ್ರದಲ್ಲಿದ್ದಂತೆ, ಗಾತ್ರ 5 ಅಡಿ 3 ಇಂಚು, ಎದೆಯ ಸುತ್ತಳತೆ 33 ಇಂಚು, ದೃಢಕಾಯ, ಉದಾರವಾಗಿ ಆಗಾಗ್ಗೆ ಹಣ ಮತ್ತು ಪಾರಿತೋಷಕವಿತ್ತು ಸಂತೋಷಗೊಳಿಸಿದರೆ ಸಂಪೂರ್ಣ ಶಾಂತಮನಸ್ಕನಾಗಿ ವಿನೋದಪರನಾಗಿರುವನು; ಎಸ್.ಎಸ್. ಎಲ್. ಸಿ. ಕಲಿತವನು; ಬೆಲೆ ನಗ್ದಿಯಾಗಿ ರೂ. 2500, ಬಳುವಳಿ ರೂ. 1000ದಷ್ಟು. ಅಥವಾ 5 ಅಡಿ 1 ಇಂಚು ಎತ್ತರ, ಎದೆ 34 ಇಂಚು, ಮುಖದಲ್ಲಿ ಸ್ವಲ್ಪ ಸಿಡುಬಿನ ಕಲೆ, ಕಣ್ಣು ತುಸು ಒಡ್ಡಾಗಿದ್ದರೂ ಸೌಂದರ್ಯವನ್ನು ಹೆಚ್ಚಿಸುವ ಸುಲಕ್ಷಣವುಳ್ಳದ್ದು; ಸೀನಿಯರ್ ಬಿ. ಎ. ಯಲ್ಲಿರುವವ, ನಗ್ದಿ ಬೆಲೆ ರೂ. 4000. ಬಳುವಳಿ ರೂ. 1500ರಷ್ಟು, ಅಥವಾ ಕಂತಿನಿಂದ ಹಣ ತೆರಬಹುದು; ರೂಪ ಫೊಟೋದಲ್ಲಿದ್ದಂತೆ; ಬಿ. ಎಲ್. ಕಲಿಯುವವ, ಹ್ಯಾಕೋರ್ಟ್ ಜಡ್ಜನಾಗುವ ಸಂಭವವಿದೆ, ಮದುವೆಯಾಗುವಾಗ ನಗ್ದಿಯಾಗಿ ರೂ. 5000; ಆ ಮೇಲೆ ಹೊಸ ವರ್ಷಕ್ಕೆ ರೂ. 1000, ದೀಪಾವಳಿಗೆ ರೂ. 1500, ಪ್ರಸ್ತದ ಸಂದರ್ಭದಲ್ಲಿ ರೂ. 2500, ಸಿವಿಲ್ ಸರ್ವಿಸಿನ ನಿಯಮದಂತೆ ಮದ್ರಾಸಿನಿಂದ ಹೋಗಿ ಬರಲು ಸೆಕೆಂಡ್‌ಕ್ಲಾಸ್ ರೈಲ್ವೇ ಚಾರ್ಜು, ಇನ್ನು ಪಾರಿತೋಷಕಾದಿಗಳು ಇತ್ಯಾದಿ ಇತ್ಯಾದಿ. ಇದು ವಿಕಟ ಚಿತ್ರ, ಒರಟು ಪರಿಹಾಸ್ಯವೆಂದು ತೋರಬಹುದು. ಆತ್ಮಸಾಕ್ಷಿಯಾಗಿ ಇದರಲ್ಲಿ ಒಂದಿಷ್ಟು ಅತಿಶಯೋಕ್ತಿ

ಯಿಲ್ಲ. ನಿಮಗೊಂದು ಮಗಳಿದ್ದರೆ, ನೀವೊಬ್ಬ ಅಳಿಯನಿಗಾಗಿ ಎಡೆ ಬಿಡದೆ 3 ವರ್ಷಗಳಿಂದ ಪೇಚಾಡಿ, ನಿಮ್ಮ ಸ್ಥಿತಿಗೆ ನಿಲುಕುವವನೊಬ್ಬ ನನ್ನು ಪಡೆಯದಿದ್ದರೆ, ಇಷ್ಟರಲ್ಲಿ ನೀವು ಲೋಕದಲ್ಲಿ ದೊರೆಯಬಹುದಾದ, ಆಗ ತಾನೆ ಮದುವೆಯಾಗಿ ಹೋದ, ಮತ್ತು ಹೊಸತಾಗಿ ಮದುವೆಗೆ ತಯಾರಾಗಿ ಬಂದ ಎಲ್ಲಾ ಅಳಿಯಂದಿರ ಕುರಿತು ಸಾಕಷ್ಟು ಅನುಭವ ಪಡೆದಿರಬೇಕು. ಅಂತಹ ಅಮೂಲ್ಯ ಅನುಭವದ ಉಪಯೋಗವನ್ನು ನಿಮ್ಮಂತೆಯೇ ಊರೂರು ಅಲೆದಲೆದು ಸೋತಿರುವರು ಸುಲಭವಾಗಿ ಪಡೆಯುವಂತೆ ಒಂದು ಕೆಟಲೋಗನ್ನು ತಯಾರಿಸಿದರೆ ಅವರು ನಿಜ ವಾಗಿಯೂ ನಿಮಗೆ ಚಿರಋಣಿಯಾಗದಿರರು. ಇದರಿಂದ ಮಾರ್ಕೆಟಿ ನಲ್ಲಿರುವ ಅಳಿಯಂದಿರ ಕುರಿತಾದ ಕೆಟಲೋಗೊಂದು ಎಷ್ಟೊಂದು ಅವಶ್ಯ ವೆಂಬುದು ವಿದಿತವಾಗುವುದು.

ಕಳೆದ ಕೆಲವು ವರ್ಷಗಳಿಂದ ತೋರಿಬಂದಿರುವ ಆವಶ್ಯಕತೆಯು ಇಷ್ಟರಲ್ಲಿಯೇ ಮದುವೆ ದಲಾಲಿಗಳನ್ನು ಅಥವಾ ಕೆಲವರು ತಮ್ಮನ್ನು ಸ್ವಲ್ಪ ಗೌರವದಿಂದ ಕರೆದುಕೊಳ್ಳುವಂತೆ ಕಮಿಶನ್ ಏಜಂಟರೆಂಬ ಏಜ ನ್ಸಿಯನ್ನು ಜನ್ಮಕ್ಕೆ ತಂದಿರುವುದು. ಆದರೆ ಇವರೊಳಗೊಂದು ವ್ಯವಸ್ಥೆ ಯಿಲ್ಲ, ಆಫೀಸು ಶಿಬ್ಬಂದಿಯಿಲ್ಲ. ಅವರು ಬೀದಿಬೀದಿ ಮನೆಮನೆ ತಿರುಗಿ ಸಾಮಾನು ಮಾರುವ ಅಡ್ನಾಡಿಗಳಂತಿರುವರು. ಬೀದಿ ಹೋಕರ ಸೂಕ್ಷ್ಮ ದೃಷ್ಟಿಯು ಅವರಲ್ಲಿರುವುದು. ಜನಸ್ತೋಮದಲ್ಲಿ ಇಂಥವನಿಗೇನೇ ಅಳಿ ಯನ ಅವಶ್ಯವಿದೆಯೆಂದು ಅವನ ಒಂದಿಷ್ಟು ಪೂರ್ವಪರಿಚಯವಿಲ್ಲದೇನೇ ಅವರು ಕಂಡುಕೊಳ್ಳಬಲ್ಲರು. ಪ್ರಾಯಶಃ ಅವಿವಾಹಿತ ಪುತ್ರಿಯರಿರುವ ವರ ತೀವ್ರ ಮನಸ್ತಾಪವು ಮುಖದಲ್ಲಿ ಹೊರಹೊಮ್ಮಿ ಇತರ ವ್ಯಥಿತ ಮಾನವವರ್ಗಕ್ಕಿಂತ ಭಿನ್ನವಾದೊಂದು ಮುಖಭಾವವನ್ನು ಅವರಿಗಿತ್ತಿರ ಬೇಕು. ಹೂವಿನ ಮಾರ್ಕೆಟಿನಲ್ಲಿ ತಲೆಬಾಗಿಸಿ ಕೈಯಲ್ಲೊಂದು ಬೇಗ್ ಹಿಡಕೊಂಡು, ಜೀವಿತ ತತ್ವ, ಕರ್ಮಫಲದ ಕುರಿತೆಲ್ಲಾ ಚಿಂತಿಸುತ್ತಾ ನಡೆ ಯುತ್ತಿರುವಾಗ ಆವನೋ ಒಬ್ಬನು ಬೆನ್ನು ತಟ್ಟಿ, "ನೀವು ಯಾವಾಗ ಪಟ್ಟ ಣಕ್ಕೆ ಬಂದುದು ಸ್ವಾಮಿ?" ಎಂದು ಸುಪರಿಚಿತನಂತೆ ಪ್ರಶ್ನಿಸುವನು. ಒಂದಿಷ್ಟೂ ಅವನ ಪರಿಚಯವಿಲ್ಲದ ನೀವು ಸ್ತಬ್ಧರಾಗಿ ನೋಡುತ್ತಿರುವಾಗ

"ನಿಮ್ಮ ಮಗಳಿಗೆ ಮದುವೆಯಾಯಿತೇ? ಎಂದು ಅವನು ಆತ್ಮೀಯನಂತೆ ಕೇಳುವನು. ನೀವು, "ಇಲ್ಲ" ಎಂದು ಹೇಳಿ ನಿಮಗೊಬ್ಬಳು ಮದುವೆಯಾಗುವ ಮಗಳಿರುವಳೆಂದು ಇವನಿಗೆ ತಿಳಿದ ಬಗೆ ಹೇಗೆಂದು ವಿಚಿತ್ರಪಡುತ್ತಿರುವಾಗ ಅವನು ಮತ್ತೂ ಮುಂದುವರಿದು, "ನೀವೊಂದು ನೆಂಟಸ್ತಿಕೆ ಮಾಡುವಿರಾ? ಬೇಕಾದರೆ ನೆಂಟಸ್ತಿಕೆ ಬಹಳ ಇವೆ" ಎನ್ನುವನು. ನೆಂಟಸ್ತಿಕೆಯೆಂದೊಡನೆಯೇ ನಿಮ್ಮ ಮುಖವರಳಿ ಕಣ್ಣುಗಳು ಪ್ರಕಾಶಿಸುವುವು. ಕೂಡಲೇ ಅವನು ನಿಮ್ಮ ಆಪ್ತನಾಗುವನು. ನೀವು ಅವನೊಡನೆ ಸಂಗತಿಗಳನ್ನೆಲ್ಲಾ ಮನಬಿಚ್ಚಿ ಹೇಳುವಿರಿ. ಅವನು ನಿಮಗಾಗಿ ಒಂದು ಟೀಕ್ಸಿ ಮಾಡುವನು. ಇಬ್ಬರೂ ರಸ್ತೆಯಲ್ಲೆಲ್ಲಾ ಓಡಾಡಿ, ಸಕಾಲದಲ್ಲಿ ಅಳಿಯತನಕ್ಕೆ ತಯಾರಾಗಿರುವ ಹತ್ತಿಪ್ಪತ್ತು ಅಳಿಯಂದಿರನ್ನು ಸಂಧಿಸುವಿರಿ. ಹಲವು ಪಿತೃಮಹಾಶಯರ ಭೇಟಿ ಮಾಡುವಿರಿ.ತನ್ನ ಮದುವೆಯವಿಷಯದಲ್ಲಿ ತನಗಾವ ಸಂಬಂಧವೂ ಇಲ್ಲೆಂಬಂತೆ ಮನೆಯಲ್ಲೊಂದೆಡೆ ಮಗುವನ್ನಾಡಿಸುವ ಅಥವಾ ಎಡ್ಗರ್ ವಾಲೆಸರ ನೊವೆಲನ್ನೋದುತ್ತಿರುವ, ಇಲ್ಲವೆ ಟೆನ್ನಿಸ್ ಬೇಟಿನ ದಾರವನ್ನು ಮೀಂಟುತ್ತಿರುವ ಅಳಿಯನ ಕಡೆಗೆ ಓರೆನೋಟ ಬೀರಿ ನೀವು ಅವನ ತಂದೆಯೊಡನೆ ಗಿರಾಕಿ ಮಾಡುವಿರಿ. ದರ ಎಷ್ಟೆಂದು ಒಂದು ಅಂದಾಜು ಕೇಳಿ, ಜಾತಕಗಳನ್ನೆಲ್ಲಾ ಒಟ್ಟುಮಾಡಿ, ವಿಚಾರಿಸಿ ಹೇಳುವೆನೆಂದು ಮಾತಿತ್ತು ಬಂದುಬಿಡುವಿರಿ.

ಈ ನೆಂಟಸ್ತಿಕೆಗಳನ್ನೆಲ್ಲಾ ಪರಿಶೀಲಿಸಿದರೆ ಅವನ್ನು ಕೆಲವೊಂದು ಜಾತಿಯವಾಗಿ ವಿಂಗಡಿಸಬಹುದು. ಒಂದನೇದು, ತಂದೆಯು ಶಿಕ್ಷಿತ. ಬಹುಪಕ್ಷ ನಿಮ್ಮ ಶಾಲೆ ಅಥವಾ ಕ್ಲಾಸಿನಲ್ಲೇ ಕಲಿತವ, ಕರುಣೆ ವಿನಯಗಳ ಪ್ರತಿಮೂರ್ತಿಯೆಂಬಂತೆ ಬಹಳ ಆದರವೂ ಮಧುರವೂ ಆದ ವರ್ತನೆ ಮತ್ತು ಸ್ವತಃ ಅವನೇ ಹೇಳುವಂತೆ ಸಮಾಜದ ಸುಧಾರಣಾ ಪರಿಶುದ್ಧತೆಯ ಉಚ್ಚ ಆದರ್ಶವಾದಿ. ನೀವು ಅವನ ಭೇಟಿಮಾಡಿ, ಹಳೆಯ ಶಾಲಾದಿನ, ಕ್ರಿಕೆಟ್ ಆಟವೇ ಮೊದಲಾದುವುಗಳನ್ನು ಪ್ರಸ್ತಾಪಿಸಿ, ಅಂತಹ ಸಂತೋಷದ ದಿನಗಳಿನ್ನು ಬರಲಾರವೆಂದು ಇಬ್ಬರೂ ಒಮ್ಮತದಿಂದೊಪ್ಪುವಿರಿ. "ಮಿತ್ರ, ಆ ದಿನಗಳಿನ್ನೆಲ್ಲಿ? ಇನ್ನೊಂದು ಜನ್ಮದಲ್ಲಾಯಿತು ಪುನಃ ಆ ಸುಖ." ಎಂದು ಅವನು ಉದ್ಗಾರವೆತ್ತಿದ ಮೇಲೆ ೨ ನಿಮಿಷ ಇಬ್ಬರೂ

ಗತಸ್ಮರಣೆಯ ಶೋಕ ಸೂಚಕವಾಗಿ ಮೌನಧರಿಸುವಿರಿ. ಆ ಮೇಲೆ ನೀವು, "ನಿಮಗೆ ಮದುವೆಯಾಗುವ ಪ್ರಾಯದ ಮಗನೊಬ್ಬನಿರುವನಲ್ಲವೆ?" ಎಂದು ಮೌನವನ್ನು ಮೊದಲಾಗಿ ಮುರಿದು ಕೇಳುವಿರಿ. 'ಹೌದು' ಎಂದು ಉತ್ತರ ದೊರೆಯುವುದು. "ನನಗೊಬ್ಬಳು ಮಗಳಿದ್ದಾಳೆ. ನಮ್ಮೊಳಗೊಂದು ನೆಂಟಸ್ತಿಕೆ ಮಾಡಿದರೇನು?" ಎಂದು ನಿಮ್ಮ ಮಾತು ಮುಗಿಯುವಷ್ಟರಲ್ಲಿಯೇ, "ನನಗೇನದರಲ್ಲಿ ಯೋಚಿಸಲಿದೆ? ನಮ್ಮಿಬ್ಬರೊಳಗೆ ಚಿಕ್ಕಂದಿನಲ್ಲಿದ್ದ ಮೈತ್ರಿಯ ದೃಷ್ಟಿಯಿಂದ ಅದು ಅತ್ಯಂತ ಸಂತೋಷಕರವೇ ಸರಿ." ಎಂದು ನಿಮ್ಮ ಮಿತ್ರನು ಒಪ್ಪಿಗೆ ಕೊಡುವನು. ಇದಕ್ಕಿಂತ ಸಂತೋಷ ಸಂಗತಿಯಿನ್ನೇನೂ ಇರಲಾರದು. ಇದಕ್ಕೆ ದೇವರ ಆಶೀರ್ವಾದವೂ ದೊರೆಯದಿರದೆಂದು ನೀವು ಒಪ್ಪಿ, "ಇನ್ನು ನೆಂಟಸ್ತಿಕೆ ಶರ್ತಗಳಕುರಿತು ಸ್ವಲ್ಪ ಮಾತಾಡುವ" ಎಂದೊಡನೆಯೇ ನಿಮ್ಮ ಮಿತ್ರನು ರೇಗಿಬೀಳುವನು. "ಶರ್ತ? ಏನು ಶರ್ತ? ವಿವಾಹವನ್ನು ಬರೇ ಒಂದು ವ್ಯಾಪಾರ ದೃಷ್ಟಿಯಿಂದ ನೋಡದೆ ಪ್ರೇಮಸಂಬಂಧವಾಗಿ ಮಾಡುವ ಬುದ್ಧಿಯು ಜನರಿಗೆಯಾವಾಗ ಬರುವುದೋ? ನಾನೊಬ್ಬನಾದರೂ ಅದಕ್ಕೆ ಬದ್ಧವಿರೋಧಿಯಿರುವೆನು. ನನ್ನ ಮಗನ ಮದುವೆಗೆ ಯಾವ ಶರ್ತವೂ ಇಲ್ಲ ಮಿತ್ರ! ನೀನು ನಿನಗೆ ಸಂತೋಷ ತೋರಿದುದನ್ನು ಮಾಡು. ನಾನು ನನಗೆ ಸಾಧ್ಯವಾದುದನ್ನು ಮಾಡುವೆನು. ಇದೇ ನನ್ನ ಶರ್ತ." ಎಂದು ಆವೇಗಗೊಳ್ಳುವನು. "ನಿನ್ನ ಸಂಗತಿ ನನಗೇನೂ ತಿಳಿಯದುದಲ್ಲ ಮಿತ್ರ. ಆದರೆ ಮನೆಯ ಹೆಂಗಸು—" ಎಂದು ಮಾತು ಪೂರ್ಣ ಮುಗಿಸುವ ಮೊದಲೇ ಬಾಯಿಹಾಕಿ, "ಮನೆಯ ಹೆಂಗಸೇನು? ನನ್ನ ಮನೆಯಲ್ಲಿ ಹೆಂಗಸು ಹೇಳಿದ ಹಾಗೆ. ಅದು ಹೊರತು ನನ್ನ ಹೆಂಡತಿ ಸಂಗತಿ ನಿನಗೆ ಗೊತ್ತಿಲ್ಲ." ಎಂದು ಮತ್ತಷ್ಟು ಹುರುಪಿನಿಂದ ಮಾತನಾಡುವನು. (ನಿಜವಾಗಿಯೂ ಅವನ ಹೆಂಡತಿಯ ಸಂಗತಿ ಅವನಿಗೇನೇ ಗೊತ್ತಲ್ಲದೆ ನಿಮಗೇನು ಗೊತ್ತು?) ನಿಮ್ಮ ತಲೆಯ ದೊಡ್ಡ ಭಾರವೊಂದನ್ನಿಳಿಸಿದಂತಾಗುವುದು. ಯಾವ ಪ್ರಯಾಸವೂ ಇಲ್ಲದೆ ವರನೊಬ್ಬನು ದೊರೆತುದಕ್ಕಾಗಿ ನೀವು ಉಕ್ಕಿ ಬರುವ ಸಂತೋಷವನ್ನು ಕಟ್ಟಿಕೊಂಡು, ಮರುದಿವಸ ಸಂಜೆ ಗಂಟೆ 5ಕ್ಕೆ ನಿಮ್ಮ ಗೆಳೆಯನ ಪತ್ನಿಯು ನಿಮ್ಮ ಮನೆಗೆ ಬಂದು ಹುಡುಗಿಯನ್ನು ನೋಡಬೇಕೆಂದು ನಿಶ್ಚಯ ಮಾಡುವಿರಿ.

ಆತುರ ನಿರೀಕ್ಷೆಯಲ್ಲಿಯೇ ನೀವು ಮರುದಿನ ಇಡೀ ಕಳೆಯುವಿರಿ. ಈಸಿ ಚೇಯರಿನಲ್ಲಿ ಮನೆಯ ವರಂಡದಲ್ಲಿ ಕೂತು ರಸ್ತೆಯಲ್ಲಿ ಹಾದು ಹೋಗುವ ಪ್ರತಿ ಜಟ್ಕ ಮತ್ತು ಮೋಟಾರು ಕಾರನ್ನು ಪರೀಕ್ಷಿಸುವಿರಿ. ಏನೂ ಕೆಲಸವಿಲ್ಲದೆ ಒಳಗೆ ಹೊರಗೆ ಹೋಗುತ್ತಿರುವಿರಿ. ನಿಮ್ಮ ಮಗಳು ಸ್ವಾಭಾವಿಕ ಸೌಂದರ್ಯ ಮತ್ತು ಮಧುರತೆಯನ್ನು ತೊಲಗಿಸಿ ಬಿಡುವ ಅನಾವಶ್ಯಕ ವಸನ ಭೂಷಣಗಳ ಆಡಂಬರದಿಂದ ಅತ್ತಿತ್ತ ಸರಿಯುತ್ತಿರು ವಳು. ನಿಮ್ಮ ಹೆಂಡತಿಯು ತನ್ನ ಉತ್ತಮ ಶೀರೆ, ವಜ್ರಗಳನ್ನೆಲ್ಲಾ ಧರಿಸಿಕೊಂಡು ಎಷ್ಟೊಂದು ಮನೋಹರವಾಗಿ ಶೋಭಿಸುವಳೆಂದರೆ ಅವಳ ನ್ನೊಮ್ಮೆ ಚುಂಬಿಸಿಬಿಡಬೇಕೆಂಬ ತುಟಿಯ ತವಕವು ನಿಮಗೆ ತಡೆಯ ಲಸಾಧ್ಯವಾಗುವುದು. ಆದರೆ ಅವಳು ಕೆಲಸದ ಆವಸರದಿಂದ ನಿಂತಲ್ಲಿ ನಿಲ್ಲದುದರಿಂದಲೂ, ಹುಡುಗ ಹುಡುಗಿಯರು ಮನೆಯಲ್ಲೆಲ್ಲಾ ಓಡಾಡು ತ್ತಿದ್ದುದರಿಂದಲೂ ಆ ಸಂದರ್ಭವೇ ದೊರೆಯದೆ ನೀವು ಹತಾಶರಾಗ ಬೇಕಾಗುವುದು. ೮ ವರ್ಷದ ನಿಮ್ಮ ಮಗನು "ಅವಳು ಯಾವಾಗ ಬರುವಳಪ್ಪಾ? ಯಾಕೆ ಬರಲಿಲ್ಲವಪ್ಪಾ?" ಎಂದೆಲ್ಲಾ ನಾನಾ ಪ್ರಶ್ನೆ ಗಳಿಂದ ಎಡೆಬಿಡದೆ ಪೀಡಿಸುವನು.

ಆಗ ಮೋಟರಿನ ಹೋರ್ನಿನ ಶಬ್ದವು ನಿಮ್ಮ ಮನೆಗೆ ತಿರುಗುವ ರಸ್ತೆಯ ಕಡೆಯಿಂದ ಕೇಳಬರುವುದು. ಅವರೇ, ಹೌದು, ಈಗ ಬಂದವ ರವರೇ. ನಿಮ್ಮ ಮಗನು ಮನೆಯೊಳಗೋಡಿ, "ಅವರು ಬಂದರು, ಅಮ್ಮಾ ಅವರು ಬಂದರು" ಎಂದು ಬರುವವರಿಗೆ ಕೇಳುವಂತೆಯೇ ಕೂಗಿ ಅವರನ್ನು ನೋಡಲು ಹೊರಗೋಡಿ ಬರುವನು. ನಿಮ್ಮ ಹೆಂಡತಿಯು ಗಡಿಬಿಡಿಯಿಂದ ಯಾಕೋ ಕೆಲವು ವಸ್ತುಗಳನ್ನು ತೆಗೆದು ಇನ್ನುಕೆಲವನ್ನು ತಂದಿಡುವಳು. ಮೋಟರ್‌ಕಾರು ಮನೆಯ ಬಳಿ ಬಂದು ನಿಂತೊಡನೆಯೇ ಆದರೊಳಗಿಂದ ಬಹಳ ಶೋಭೆಯಿಂದ ಶೃಂಗರಿಸಿರುವ ಒಬ್ಬ ಸ್ತ್ರೀಯೂ ೩ ಮಂದಿ ಹುಡುಗಿಯರೂ ಹೊರಬಂದು ವರಂಡದಲ್ಲಿ ನಿಂತಿರುವ ನಿಮ್ಮನ್ನು ನೋಡಿ ಸಹಜ ಲಜ್ಜೆ ಬೀರುವರು. ಅವರು ಒಳಗೆ ಹೋಗಿ ಪಡಸಾಲೆಯಲ್ಲಿ ನಿಮ್ಮ ಪತ್ನಿಯಿಂದ ಎದುಗೊಳ್ಳಲ್ಪಟ್ಟು ಕೂತು ಮಾತಾ ಡುವರು. ಹೊರಗೆ ನೀವು ಡ್ರೈವರನೊಡನೆ ಮಾತಾಡುತ್ತಾ, ನಿಮ್ಮ

ಮಿತ್ರನು ಅವನ ಪತ್ನಿಯೊಡನೆ ನಿಮ್ಮ ಸೆಂಟಿಸ್ತಿಕೆಯ ಕುರಿತು ಮಾತಾಡಿದ ಸಂಗತಿ, ಹುಡುಗಿಯು ಸುಂದರಿಯೂ ಆರೋಗ್ಯ ಶಾಲಿಯೂ ಇದ್ದರೆ ವರದಕ್ಷಿಣೆ ರೂ. ೭೦೦೦ ದೊರೆಯಬೇಕೆಂದು ಮಾಡಿದ ನಿರ್ಧಾರ, ಸಬ್ ಜಡ್ಜರೊಬ್ಬರು ರೂ.೪೦೦೦ ಕೊಡುವೆನೆಂದಾಗಅವನೊಡನೆ ಬೇಕಾದಷ್ಟು ಹಣವಿರುವಾಗ ರೂ. ೪೦೦೦ ಮಾತ್ರ ಕೊಡಲೇಕೆಂಬ ನಿಮ್ಮ ಮಿತ್ರನ ಮಾತಿನ ಸಂಗತಿಯನ್ನೆಲ್ಲಾ ಕೇಳಿ, “ಅಂತಹ ವಿಷಯಗಳಿಗೆಲ್ಲಾ ನಿನ್ನ ಯಜಮಾನರು ಬದ್ಧ ವಿರೋಧಿಯೆಂದರಲ್ಲಾ ನನ್ನೊಡನೆ?” ಎಂದು ಡ್ರಾಯ್ವರನನ್ನು ಪ್ರಶ್ನಿಸುವಿರಿ. “ಅವರು ಹೇಳಿದುದೇ! ನಿಮಗವರ ಸಂಗತಿ ಗೊತ್ತಿಲ್ಲ ಸ್ವಾಮಿ. ಅವರು ಮಾತಾಡುವುದೇ ಹಾಗೆ. ಹಾಗಾದರೆ ಅವರ ಮೊದಲನೇ ಮಗನಿಗೆ ರೂ. ೬೦೦೦ ವರದಕ್ಷಿಣೆ ತೆಗೆದುಕೊಂಡುದೇಕೆ? ಆದರೆ ಸ್ವಾಮಿ, ನಾನು ಹೇಳಿದೆನೆಂದು ಮಾತ್ರ ಹೇಳಬೇಡಿ. ಅವರು ಏನು ಮಾಡಿದರೆ ನಮಗೇನು ಚಾಕರಿಯವರಿಗೆ” ಎಂದು ಡ್ರಾಯ್ವರನು ಒಳಗುಟ್ಟನ್ನೆಲ್ಲಾ ಹೊರಹಾಕುವನು. ಸುಮಾರು ಒಂದು ಘಂಟೆಯ ಮೇಲೆ ಬಂದವರೆಲ್ಲಾ ಹಿಂದೆ ಹೋಗುವರು. ಆಗ ನಿಮ್ಮ ಹೆಂಡತಿಯು ಸಿಡುಕು ಮೋರೆಯಿಂದ ಹೊರಬಂದು, “ಒಳ್ಳೇ ಜನರನ್ನು ಆರಿಸಿರುವಿರಿ ನೀವು! ಅವಳ ಲೋಭತ್ವಕ್ಕೊಂದು ಮಿತಿಯೇ ಇಲ್ಲವೆಂಬಂತೆ ತೋರುತ್ತದೆ. ಅವಳ ಮೊದಲನೇ ಮಗನಿಗೆ ರೂ. ೬೦೦೦ ಪಡೆದಿರುವಳಂತೆ. ನಮ್ಮ ಮೊದಲನೇ ಹುಡುಗಿಗೆ ಎಷ್ಟು ವರದಕ್ಷಿಣೆ ಕೊಟ್ಟಿರುವಿರೆಂದು ಕೇಳಿದಳು. ನಾನು ಹೇಳಿದೆ. ಅವಳು ಮೌನವಾದಳು. ಆದರೆ ಅವಳ ಮುಖವು ಪ್ರತ್ಯಕ್ಷ ತಿರಸ್ಕಾರ ಸೂಚಕವಿದ್ದು ‘‘ಇವರು ನಮಗೆ ಹೇಳಿಸಿದ ಜನರಲ್ಲ” ಎನ್ನುವಂತಿತ್ತು.

ಇದನ್ನು ಕೇಳಿ ನೀವು ತೀವ್ರ ವ್ಯಾಕುಲದಿಂದ ಕುರ್ಚಿಗೊರಗಿ ಮಾನವ ದ್ವೇಷಪೂರ್ಣ ಭಾವನೆಯುಳ್ಳವರಾಗುವಿರಿ. ಮರುದಿನ ನಿಮ್ಮ ಮಿತ್ರನಿಂದ ನಿಮಗೊಂದು ಪತ್ರ ಬರುವುದು.

‘‘ಪ್ರಿಯ ಮಿತ್ರ,

ನಿನ್ನ ಮಗಳ ಕುರಿತು ನನ್ನ ಪತ್ನಿಯು ಬಹಳ ಮೆಚ್ಚಿಹೋಗಿದ್ದಾಳೆ. ಅವಳ ಲಾವಣ್ಯ ಮತ್ತು ಮನೋಹರತೆಯನ್ನು ಅವಳಿಗೆ ಹೊಗ

ಳಿದಷ್ಟು ಸಾಲದು. ಮತ್ತು ಬಹು ಸೊಗಸಾಗಿ ಹಾಡುವಳಂತೆ. ಆದರೆ ಅಂತಹ ಒಳ್ಳೇ ಸೊಸೆಯನ್ನು ಪಡೆವ ಭಾಗ್ಯವು ನನಗಿರುವಂತಿಲ್ಲ. ದೈವವು ಅದಕ್ಕೆ ವಿರೋಧವಿರುವಂತಿದೆ. ಜಾತಕಗಳು ಸ್ವಲ್ಪವೂ ಸರಿಹೋಗುವುದಿಲ್ಲೆಂದು ತಿಳಿದು ಬಂದಿದೆ. ಎಷ್ಟು ಶೋಚನೀಯವು! ಪರಂತು ನಿನ್ನ ಪುತ್ರೀರತ್ನಕ್ಕೆ ಎಷ್ಟೊಂದು ಒಳ್ಳೇ ಭಾಗ್ಯವಿದೆಯೆಂದು ಹೇಳ ಬರುವುದಿಲ್ಲ. ನಾನಂತೂ ಆಶಾಭಂಗವನ್ನು ಎಂದೂ ಮರೆಯೆನು.

ನಿನ್ನ ಅತ್ಯಂತ ಪ್ರೀತಿಯ "ಗೆಳೆಯ."

ಇದೀಗ ಒಂದು ಜಾತಿಯ ಅಳಿಯನಾಯಿತು. ಇನ್ನು ಎರಡನೇ ಜಾತಿಯೊಂದಿದೆ. ತಂದೆಯು ಶಿಕ್ಷಿತನೇ, ಆದರೆ ಕುಬೇರನ ಐಶ್ವರ್ಯವೆಲ್ಲಾ ದೊರೆತರೂ ತೃಪ್ತಿಗೊಳ್ಳದ ವಾವನೊಬ್ಬನೂ ಇರುವನು. ಮೂರನೇ ವಿಧದವನು ತಂದೆಯಿಲ್ಲದ ಹುಡುಗನು. ಅವನ ವಿಧವೆ ತಾಯಿಯು ಅವನನ್ನು, ಪ್ರಾಚೀನ ಸಾಮಾನಿನಂತೆ ಅಥವಾ ಉಪಯೋಗಿಸಿದ ವಿದೇಶಿ ಪೋಸ್ಟೆಜ್ ಸ್ಟೇಂಪಿನಂತೆ ಕಾಪಾಡಿಕೊಂಡು ಬಂದಿರುವಳು. ಇಂತಹ ಅಪರಂಜಿ ವಸ್ತು ಸಂಗ್ರಹಿಯಾದ ಯಾರಾದರೂ ವಿಲಕ್ಷಣ ಮನುಷ್ಯನೊಬ್ಬನು ಬಂದು ಮನಸೇಚ್ಛೆ ಬೆಲೆ ಕೊಡುವನೆಂದೇ ಅವಳ ನಿರೀಕ್ಷೆ. ಇನ್ನೂ ಒಂದೆರಡು ವಿಧದ ಅಳಿಯಂದಿರಿರುವರು. ಆದರೆ ಯಾವ ವಿಧದ ಅಳಿಯಂದಿರನ್ನು ಆರಿಸಿದರೂ ಅವರೆಲ್ಲರಿಗೂ ಸಾಮಾನ್ಯ ಗುಣವೆಂದರೆ ಹೇಗಾದರೂ ಹೆಚ್ಚಿನ ಹಣ ಹೊಡೆದುಬಿಡುವುದು. ವಿವಾಹವನ್ನು ವ್ಯಾಪಾರ ವಹಿವಾಟಾಗಿ ಮಾಡದ, ನಿಮ್ಮ ಹೆಣದ ಚೀಲದ ಮೇಲೆ ಕಡು ಕೃಪಣತೆಯ ತಂತ್ರನಡಿಸದ ಅಳಿಯಂದಿರನ್ನು ಅಥವಾ ಅವರ ಹೆತ್ತವರನ್ನು ಕಾಣುವೆನೆಂದೆಲ್ಲಿಯಾದರೂ ನಿಮ್ಮ ಕಲ್ಪನೆಯಿದ್ದರೆ ಅಂಥವರು ಈ ಲೋಕದಲ್ಲಿ ಸಿಗಲಾರರು. ಪ್ರಾಯಶಃ ಮಂಗಳ ಗ್ರಹವಾಸಿಗಳಲ್ಲಿರಬಹುದು. ಅಲ್ಲಿಯೂ ನಮ್ಮ ಜನರು ಅವರೊಡನೆ ಮಾತುಕಥೆ ನಡಿಸುವ ಮೊದಲೇ ನೀವು ಅಲ್ಲಿಗೆ ಧಾವಿಸಿ ಅವರನ್ನು ಹಿಡಿಯತಕ್ಕದ್ದು.

(ಎಸ್. ಎ. ವಿ. ಯವರ "ಹಂಟ್ ಫೊರ್ ಎ ಸನ್ ಇನ್ ಲೋ" ಎಂಬ ಕಥೆಯನ್ನನುಸರಿಸಿ ಬರೆದುದು.)

– **ನವಯುಗ.**

---

# ೯. ಕೈ ಚೀಲ

ನಮ್ಮಾಕೆಗೊಂದು ಕೈಚೀಲವಿದೆ. ಈಗ ತಾನೆ ಒಂದು ತಿಂಗಳ ಹಿಂದೆ ಅದನ್ನು ಕೊಂಡುಕೊಂಡು ಅದರ ಪ್ರದರ್ಶನವೂ ಎಲ್ಲೆಡೆಗಳಲ್ಲಿಯೂ ನಡೆಯಿತು. ಅದಕ್ಕಾಗಿ ನನ್ನ ಜೇಬಿನ ಐದು ರೂಪಾಯಿಗಳು ಚಲೋ ರೀತಿಯಲ್ಲಿ ನಾಯಕರ ಖಜಾನೆಯನ್ನು ಸೇರಿದವು. ಅದರೊಳಗೇನಿದೆಯೆಂದು ಮೊನ್ನೆ ನಾನೊಮ್ಮೆ ಇಣಿಕಿ ನೋಡಿದೆ. ಅದರಲ್ಲಿದ್ದು ಒಂದು ಕೈಗನ್ನಡಿ, ಚಿಕ್ಕ ಬಾಚಣಿಗೆ,ರವಷ್ಟು ಮುಖಕ್ಕೊರಸಿಕೊಳ್ಳುವ ಧೂಳು, ಒಂದು ಚೂರು ಕಾಗದ. (ಅದು ನನ್ನ ಫೋಟೋ) ನನ್ನೆಣಿಕೆ ಮೇರೆಗೆ ನನ್ನ ಸಿಗರೇಟಿಗೆ ದುಡ್ಡಿದೆಯೆಂದೆಣಿಸಿದುದು ನಿಷ್ಫಲವಾಯಿತು.

ಆ ಕೈಚೀಲದ ಇರುವಿಕೆ ನಮ್ಮಾಕೆಗೆ ಗೊತ್ತೇ ಇರಲಿಲ್ಲ. ಅಂದೊಮ್ಮೆ ನಮ್ಮ ಮಿತ್ರರ ಪುತ್ರಿ ಮೊನ್ನೆ ತಾನೇ ಬಿ. ಎ. ಪಾಸು ಮಾಡಿದ ಆ ಚಂದಿರಮ್ಮ ನಮ್ಮಲ್ಲಿಗೆ ಬಂದಿದ್ದರು. ಅವರ ಕೈಯಲ್ಲಿ ಒಂದು ಕೈಚೀಲವಿತ್ತು. ಬಹು ನಾಜೂಕಾದ ಮಿರುಮಿರನೆ ಹೊಳೆಯುತ್ತಿದ್ದ ಕೈಚೀಲ. ಅದನ್ನು ನೋಡಿ ನಮ್ಮಾಕೆಗೆ ಏನೋ ಕುತೂಹಲವುಂಟಾಯಿತು. “ಚಂದಿರಮ್ನೋರೆ, ಇದೇಕೆ ಈ ಕೈಚೀಲ?” ಎಂದು ಮೆಲ್ಲಗೆ ಕೇಳಿದಳಂತೆ. ಅದಕ್ಕೆ ಚಂದಿರಮ್ನೋರು, “ಇದೇ ನೋಡಿ; ಕೈಚೀಲ ಗಂಡಂದಿರ್ನ ಬಚ್ಚಿಡೋಕೆ! ಇದ್ನ ತಗೊಂಡ್ರೆ ಗಂಡಂದ್ರು ಮಾತಾಡೋದಿಲ್ಲ! ಮತ್ತೆ ಅವ್ರು ಹೆಂಗ್ಸ್ರ ಹೇಳ್ದಾಗೆ!” ಎಂದು ಪಿಸುಮಾತಿನಲ್ಲಿ ಹೇಳಿಬಿಟ್ಟರಂತೆ. ಅಂದಿನಿಂದ ನಮ್ಮಾಕೆಗೆ ಕೈಚೀಲದ ಮೇಲೆ ಮನಸ್ಸಾಯಿತು. ನನ್ನ ಜೇಬಿನ ರೂಪಾಯಿಗಳ ಜಪ್ತಿಯೂ ಆಯಿತು. ಇದನ್ನು ಕಂಡು ನಮ್ಮ ನೆರೆಮನೆ ಸುಬ್ಬರಾಯರ ಪತ್ನಿಯೂ ಒಂದು ಕೊಂಡುಕೊಂಡರು. ಅವೀಗ ನಮ್ಮ ಬೀದಿ ತುಂಬಾ ಇವೆ. ನಮ್ಮ ಬೀದಿಯಲ್ಲಿ ನಡೆದು ಹೋಗುವ ಪ್ರತಿಯೊಬ್ಬ ಹೆಂಗಸೂ ಕೈಚೀಲ ಹಿಡ್ಕೊಂಡು ತಿರುಗುತ್ತಾ ಇದ್ದಾಳೆ. ಅದೇಕೆ ನಮ್ಮ ಶ್ರೀಕಾಂತರ ಹೆಂಡತಿ, ಐವತ್ತು ವರ್ಷದ ಮುದುಕಿ,ಎರಡು ಕೈಚೀಲ ಹಿಡ್ಕೊಂಡು ತಿರುಗುತ್ತಾಳೆ.ಮತ್ತಿನ್ನು

ಮನೆಗೆ ಬಾರದೆ ಎಲ್ಲೆಲ್ಲಿಯೋ ತಿರುಗಾಡುತ್ತಿರುವ ಆ ಶಿವರಾಯರ ಪತ್ನಿಯು ಕೈಯಲ್ಲಿ ಐದು ಚೀಲಗಳಿವೆ.ಅದೆಂತಹ ಪ್ರದರ್ಶನ! ಸೂರ್ಯನ ಕಿರಣಗಳು ಆ ಚೀಲಗಳ ಮೇಲೆ ಬಿದ್ದಾಗ ಸಪ್ತ ಬಣ್ಣಗಳು ಒಡೆದು ತೋರುತ್ತವೆ. ಅವುಗಳ ಕಾಂತಿಯು ಪುಟವೇರಿ ಮುಖಕ್ಕೆ ನೆಗೆದು ಒಣಮೋರೆಯನ್ನು ರಮ್ಯವಾಗಿ ತೋರುವಂತೆ ಮಾಡುತ್ತದೆ. ಆಶ್ಚರ್ಯ! ಆಶ್ಚರ್ಯ! ಅವುಗಳ ಸೌಂದರ್ಯವನ್ನು ವರ್ಣಿಸಲಿಕ್ಕೆ ಕಾಳಿದಾಸನೇ ಜನ್ಮವೆತ್ತಬೇಕು! ಆದರೆ ನಮ್ಮಾಕೆ ಈಗ ಕೈಚೀಲ ಒಗೆದು ಬಿಟ್ಟಿದ್ದಾಳೆ. ಯಾಕೆ? ಚಂದಿರವ್ವನೋರ ಮಾತು ಫಲಿಸಲೇ ಇಲ್ಲ!!

ಮೊನ್ನೆ ನಮ್ಮಾಕೆ ಏನೂ ಅರಿಯದಂತೆ ಪ್ರಸ್ತಾಪವನ್ನೆತ್ತಿದಳು. “ಅದೇಕೆ ಚಂದಿರವ್ವನೋರ ಕೈಲಿ ಅದೊಂದು ಕೈಚೀಲ?” ಅಂತ. “ಅಹುದು ಅದು, ಚಂದಿರವ್ವನೋರಿಗೆ ಲಗ್ನ ಆಗಿಲ್ಲಾ. ನಮ್ಮುಡುಗರಲ್ಲೊಬ್ರನ್ನ ಎಳ್ಕೋ ಬೇಕಲ್ಲಾ, ಅದಕ್ಕೆ ಸಾಹಿತ್ಯ” ಎಂದೆ. ‘ಹಂಗಾದ್ರೆ, ಮದ್ವೆಯಾದೋರ್ಗೆ ಅವಶ್ಯಾನೇ ಇಲ್ಲ ಅಲ್ವ’ ಅಂದ್ಳು. ‘ಹೂಂ, ಹೂಂ. ಚಂದಿರವ್ವನೋರಂತೋರಿಗೆ ಹಾಗೆ ಆಗ್ಬೇಕು! ನೋಡೀಗ ಓದಿದೋರ್ಗೆ ಗಂಡಾ ಸಿಕ್ಕೋದೇ ಇಲ್ಲ. ಗಂಡ ಸಿಕ್ಬೇಕಾದ್ರೆ ಒಲ್ಸ್ಕೋ ಬೇಕು. ಒಲ್ಸ್ಕೋಬೇಕಾದ್ರೆ ಆಕರ್ಷಣ ಮಾಡ್ಕೊಳಾಕೆ ಒಂದು ವಸ್ತು ಬೇಕು. ಅದೇ ನೋಡು ಹುಡ್ಗ್ರು ಆ ಕೈ ಚೀಲಾನ ಮೊದ್ಲು ನೋಡಿ ಆಮೇಗೆ ಮುಖಾನ ನೋಡ್ತಾರೆ” ಎಂದೆ. ‘ಓ, ಸರ್ಯೆ’ ಎಂದು ಅವಳೆಂದ್ಳು. ನಾನು ಈ ಕಡೆ ತಿರುಗಿ ಆಲೋಚನೆ ಮಾಡುವುದಕ್ಕೆ ಶುರುಮಾಡಿದೆ.

“ಅದೇಕೆ ಈ ಹೆಂಗ್ಸಿರ್ಗೆ ಗಂಡ್ಸರ್ನ ಒಲ್ಸ್ಕೊಳಾಕೆ ಒಂದು ಕೈ ಚೀಲ ಬೇಕು” ಅಂತ. ಈಗ ಪ್ರಪಂಚದಲ್ಲಿ ಅದೇನೋ ಎಲ್ಲರಲ್ಲಿಯೂ ಒಂದು ಆಲೋಚನೆ ಹುಟ್ಟಿದೆ. ತಾನು ಇನ್ನೊಬ್ಬರು ಹೇಳಿದ ಹಾಗೆ ಕೇಳಬಾರದು ಎಂದು ಎಲ್ಲರೂ ಆಲೋಚಿಸತೊಡಗಿದ್ದಾರೆ. ಆದರೆ ಇನ್ನೊಬ್ಬರನ್ನು ತಾನು ವಶಮಾಡಿಕೊಳ್ಳಬೇಕೆಂಬ ಭಾವನೆ ಎಲ್ಲರಲ್ಲಿಯೂ ಹುಟ್ಟಿದೆ. ಅದು ನಮ್ಮ ಸಮಾಜದಲ್ಲಿ ಮನೆ ಮಾಡಿದೆ. ಅದರಲ್ಲೂ ಈಗ ಬಿ. ಎ., ಎಮ್. ಎ. ಕಲಿತ ಹುಡುಗಿಯರಲ್ಲಿ ನೆಲೆಯಾಗಿ ನಿಂತಿದೆ. ಸಮಾಜದಲ್ಲಿ ಪರಸ್ಪರ ಸಂಬಂಧವು ಯಾರಿಗೂ ಗೊತ್ತಿರುವಂತಿಲ್ಲ. ಪ್ರೀತಿ

ಅಥವಾ ಪ್ರೇಮವೇ ಸಂಬಂಧಕ್ಕೆ ಮೂಲಕಾರಣವೆಂದು ಎಣಿಸುವವರು ಬಹಳ ಕಡಿಮೆ. ತಮ್ಮ ಖ್ಯಾತಿಗೆ ತಕ್ಕ ಸನ್ಮಾನ, ತಮ್ಮ ಬಿರುದಿಗೆ ತಕ್ಕ ಗೌರವ, ತಮ್ಮ ಸ್ಥಿತಿಗೆ ತಕ್ಕ ಸೇವೆ ದೊರಕಲೇಬೇಕೆಂದು ಎಲ್ಲರೂ ಪ್ರಯತ್ನ ಪಡುತ್ತಿರುವರು. ಆದರೆ ಪರಸ್ಪರ ಸಂಬಂಧ ಮತ್ತು ಪರಸ್ಪರ ನಂಬಿಕೆ ಅನುರಾಗ ಯಾರಲ್ಲಿಯೂ ಇಲ್ಲ. ಒಬ್ಬರು ಇನ್ನೊಬ್ಬರನ್ನು ದಾಸರನ್ನಾಗಿ ಮಾಡಲಿಕ್ಕೆ ಪ್ರಯತ್ನಿಸುತ್ತಾರೆ. ರಾಜನು ಪ್ರಜೆಗಳನ್ನೂ, ಪ್ರಜೆಗಳು ರಾಜನನ್ನೂ, ಶ್ರೀಮಂತರು ಬಡವರನ್ನೂ. ಬಡವರು ಶ್ರೀಮಂತರನ್ನೂ, ಧನಿಗಳು ಒಕ್ಕಲುಗಳನ್ನೂ, ಒಕ್ಕಲುಗಳು ಧನಿಗಳನ್ನೂ, ಗಂಡಸರು ಹೆಂಗಸರನ್ನೂ, ಹೆಂಗಸರು ಗಂಡಸರನ್ನೂ, ಗಂಡ ಹೆಂಡತಿಯನ್ನೂ, ಹೆಂಡತಿ ಗಂಡನನ್ನೂ, ವಿದ್ಯಾವಂತರು ಅವಿದ್ಯಾವಂತರನ್ನೂ, ಅವಿದ್ಯಾವಂತರು ವಿದ್ಯಾವಂತರನ್ನೂ ವಶಪಡಿಸಿಕೊಳ್ಳಲು, ಒಬ್ಬರನ್ನೊಬ್ಬರು ದಾಸರನ್ನಾಗಿ ಮಾಡಲು ಸದಾಕಾಲವೂ ಪ್ರಯತ್ನಪಡುತ್ತಾರೆ. ಯಾಕೆ? ಇಡೀ ಸೃಷ್ಟಿಯ ನಿಯಮಗಳು ಅದೇ ರೀತಿಯಲ್ಲಿ ನಡೆಯುತ್ತಿವೆ. ಅಂದ ಮೇಲೆ ಹೆಂಗುಸರು ಗಂಡುಸರನ್ನು ದಾಸರನ್ನಾಗಿ ಮಾಡಿಕೊಳ್ಳಲು ಯತ್ನಿಸುವದು ಕೆಟ್ಟದೇ ಎಂಬ ವಿಚಾರವು ನನಗೆ ತೋರಿತು. ಆದರೆ ಹೆಂಗುಸರು ಗಂಡಸರನ್ನು ಕೈಚೀಲದಲ್ಲಿ ಹಾಕಿಕೊಳ್ಳಲು ಪ್ರಯತ್ನಿಸುವುದರಲ್ಲಿ ಮಾತ್ರ ನಿಜತ್ವವಿದೆ! ಆ ಪ್ರಯತ್ನದಲ್ಲಿ ಜಯವು ಸಿಕ್ಕಿದೆ. ಯಾಕೆ? ಅವುರಂಗಜೇಬನೇ ತಾನು ರಾಜಪುತ್ರಿಗೆ ಕಾಗದ ಬರೆದಿದ್ದನಂತೆ. ಹಿಂದೆ ಶ್ರೀ ಕೃಷ್ಣನೇ ಸತ್ಯಭಾಮೆಯ ದಾಸನಾಗಿ ನಲಿಯಲಿಲ್ಲವೆ? ಅಂದ ಮೇಲೆ ಹೆಂಗಸರೇಕೆ ಗಂಡಸರನ್ನು ತಮ್ಮ ಕೈಚೀಲದೊಳಗೆ ಹಾಕಿಕೊಳ್ಳಲು ಪ್ರಯತ್ನಿಸುವದು? ಅದರಲ್ಲೂ ಬಿ. ಎ, ಎಂ. ಎ. ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಯುವತಿಯರು ಯಾವಾಗಲೂ ತಮ್ಮ ಗಂಡಂದಿರನ್ನು ಕೈಚೀಲದೊಳಕ್ಕೆ ತುಂಬಿಸಲು ಹೆಚ್ಚು ಸಾಹಸ ತೋರುತ್ತಿರುವರು? ನಮ್ಮಾಕೆಯು ನನ್ನ ಫೋಟೋವನ್ನು ಕೈಚೀಲದಲ್ಲಿಟ್ಟು ಬಾಯಿ ಕಟ್ಟಿ ಬಿಟ್ಟಿದ್ದಳು. ಅಂದ ಮೇಲೆ ನಾನು ಸಹ ಕೈಚೀಲದೊಳಗೆ ಸಿಕ್ಕಿಬಿದ್ದೆನು. ಆದ್ದರಿಂದ ಗಂಡಸರೇ ತಾವಾಗಿ ಅವರ ಕೈಗೆ ಸಿಕ್ಕಿ ಬೀಳುವುದರಿಂದ ಹೆಂಗಸರು ಪ್ರಯತ್ನಮಾಡುವುದೇ ಪ್ರಯೋಜನವಿಲ್ಲ.

ಆದರೊಂದು ಮಾತು. ಇಬ್ಬರಲ್ಲೊಬ್ಬರು ಪ್ರಭುತ್ವಕ್ಕೆ ತಿಲಾಂಜಲಿಯನ್ನು ಕೊಟ್ಟು ದಾಸ್ಯತನದ ನೊಗಕ್ಕೆ ತಲೆಯೊಡ್ಡಬೇಕು. ಆದರೆ ನಮ್ಮ ಸಮಾಜದಲ್ಲಿ ಪಾಶ್ಚಿಮಾತ್ಯರಂತೆ ದಾಸ್ಯತನವು ದಂಪತಿಗಳಲ್ಲಿಲ್ಲ. 'ಕೊಟ್ಟುತರು'ವುದುಎಂಬ ಹೇಳಿಕೆಯಂತೆ ಸಂಸಾರದಲ್ಲಿ ಭಾಗವಹಿಸಿ ಪ್ರತಿಯೊಬ್ಬ ವ್ಯಕ್ತಿಯೂ ಕೆಲಸಮಾಡುತ್ತಾನೆ ಇಲ್ಲವೆ ಕೆಲಸ ಮಾಡುತ್ತಾಳೆ. ಇಬ್ಬರೂ ದಾಸ್ಯತನದ ನೊಗಕ್ಕೆ ಕೊರಳನ್ನು ಕೊಟ್ಟಿರುವರು. ಒಬ್ಬರು ಇನ್ನೊಬ್ಬರಿಗೆ ಪರಸ್ಪರ ದಾಸರು. ಒಬ್ಬರನ್ನು ಹೊಂದಿಕೊಂಡು ಇನ್ನೊಬ್ಬರು ಜೀವನ ನಡಿಸುತ್ತಿರುವರು. ಒಬ್ಬರು ಹೊರಗೆ ಗೇಯುವುದಾದರೆ ಇನ್ನೊಬ್ಬರು ಮನೆಯಲ್ಲೇ ಗೇಯುತ್ತಾರೆ. ತಂದುದನ್ನು ತಿಂದುಹಾಕುವ ಕೆಲಸವು ಮಾತ್ರ ಹೆಂಗುಸರದಲ್ಲ. ಕೆಲಸ ಮಾಡಿ ತಂದುಹಾಕುವುದು ಮಾತ್ರ ಗಂಡುಸರ ಕೆಲಸವಲ್ಲ. ಹೆಂಗುಸರು ಗಂಡುಸರಿಗಿಂತಲೂ ವಿಶೇಷವಾದ ಕಾರ್ಯಕ್ಕೆ ಕೈಹಚ್ಚುತ್ತಾರೆ. ಆದ್ದರಿಂದಲೇ ನಮ್ಮ ಶಾಸ್ತ್ರಗಳಲ್ಲಿ ಅವರಿಗೆ ಶ್ರೇಷ್ಠತೆಯೂ ಮಾನ್ಯತೆಯೂ ಬಂದಿದೆ. ಆದ್ದರಿಂದಲೇ ಗೃಹಿಣಿ ಎಂಬ ಶಬ್ದವು ಗೃಹಸ್ಥನೆಂಬ ಶಬ್ದಕ್ಕಿಂತ ಮಹತ್ವವಾದ ಅರ್ಥವುಳ್ಳದ್ದು. ಹೆಂಗುಸರ ಸ್ಥಾನಮಾನವು ವಿಶೇಷವಾದುದು. ಆದ್ದರಿಂದ ಹೆಂಗುಸರು ಆದರಲ್ಲೂ ನಮ್ಮ ವಿದ್ಯಾವತಿಯರಾದ ಯುವತಿಯರು ಗಂಡುಸರನ್ನು ಕೈಚೀಲದೊಳಗೆ ಹಾಕಿಕೊಳ್ಳಲು ಪ್ರಯತ್ನಿಸುವುದೇ ಬೇಡ – ಆದರೆ ಲಗ್ನವಾಗದವರು ಮಾತ್ರ ಕೈಚೀಲ ಹಿಡಿದುಕೊಳ್ಳುವುದು ಉತ್ತಮ—ಆದ್ದರಿಂದ ಕೈಚೀಲಗಳು ಇನ್ನೂ ತುಂಬಲಿ! ಕೈಚೀಲಗಳಿಗೆ ಜಯವಾಗಲಿ!

—**ರಂಗನಾಥ.**



# ೧೦ "ಪ್ರಾಯಶ್ಚಿತ್ತ"

ರಾಧೆ ಶೂದ್ರರ ಹುಡುಗಿ. ಆಕೆಯ ತಂದೆ ತಾಯಿಗಳು ಆಕೆ ಇನ್ನೂ ಹತ್ತು ವರ್ಷದಲ್ಲಿರುವಾಗಲೇ ಮೃತ್ಯುವಶರಾಗಿದ್ದರು. ತಂದೆ ತಾಯಿಗಳ ನಿಷ್ಕಳಂಕ ಸ್ವರ್ಗೀಯ ಪ್ರೇಮದ ಅಮೃತ ಬಿಂದುವನ್ನು ಸವಿಯುವ ಆ ಭಾಗ್ಯವು ರಾಧೆಯ ಅದೃಷ್ಟದಲ್ಲಿರಲಿಲ್ಲ. ಆದುದರಿಂದ ಆಕೆಯನ್ನು ಎಲ್ಲರೂ 'ಅನಾಥೆ, ಭಿಕಾರಿಣಿ' ಎಂದು ಕರೆಯುತ್ತಿದ್ದರು. ಭಿಕ್ಷುಕರೆಂದರೆ ದುಃಖ ಕಷ್ಟಗಳ ಅನುಭವವಿಲ್ಲದ ರಾಜ ಮನೆತನದವರು. ಮಲಗಿದುದೇ ಹಂಸತೂಲಿಕಾ ತಲ್ಪ. ಉಂಡುದೇ ಮೃಷ್ಟಾನ್ನ. ಧರಿಸಿದುದೇ ಪೀತಾಂಬರ. ಇಡೀ ವಿಶ್ವವೇ ಅವರದಾಗಿರುತ್ತದೆ. ಸ್ವಾಮಿ ರಾಮತೀರ್ಥರು ಹೇಳಿದಂತೆ 'ಅಹಂ ಬ್ರಹ್ಮಾಸ್ಮಿ' ಎಂದು ಅವರು ಎಲ್ಲವನ್ನೂ ತನ್ನದೆಂದು ಭಾವಿಸಿ ತೃಪ್ತಿ ಪಡೆಯುತ್ತಾರೆ. ಆದರೆ ಎಷ್ಟು ದಿನ ತಾನೇ ಈ ರೀತಿ ಸಹಿಸಿ ಬದುಕಿರಬಹುದು? ಹೊಟ್ಟೆಯುರಿಯು ಶಾಂತಿಮಯ ಹೃದಯವನ್ನೂ ದಹಿಸುವುದಿಲ್ಲವೇ?

ರಾಧೆಯ ಬಾಳುವೆಯೂ ಈ ರೀತಿಯಾಯಿತು. ಮನವು ತಣಿಯುವಷ್ಟು ಬೇಡಿದಳು. ತುದಿ ಬುಡವಿಲ್ಲದೆ ಅಲೆದಾಡಿದಳು. ಆದರೆ ಪ್ರಾಯವೇರುತ್ತಿದ್ದಂತೆ ರಾಧೆಗೆ ಅನ್ನಿಸಿತು—ಇನ್ನು ಈ ರೀತಿ ಇರಬಾರದೆಂದು! ಸ್ವಾಭಿಮಾನದ ಕೂಗು ಆಕೆಯ ಹೃದಯವನ್ನು ತೀಕ್ಷ್ಣವಾಗಿ ಇರಿಯಲಾರಂಭಿಸಿತು. ತಾನೆಲ್ಲಾದರೂ ದೊಡ್ಡವರ ಮನೆಯಲ್ಲಿ ಚಾಕರಿಗೆ ನಿಲ್ಲಬೇಕೆಂದು ಆಕೆ ನಿಶ್ಚೈಸಿದಳು.

ಗಂಗಾಧರರಾಯರು ಆ ಊರಿನ ದೊಡ್ಡ ಜಮೀನ್ದಾರರು. ಪ್ರತಿಷ್ಠಿತ ಸಮಾಜದ ಮುಂದಾಳುಗಳು. ಅವರೆಂದರೆ ಆ ಊರವರಿಗೊಂದು ಗೌರವ. ನೀರಿನ ಬರಗಾಲವು ಆ ಊರವರಿಗೆ ಬಹಳವಾದುದರಿಂದ, ರಾಯರು ತಮ್ಮೂರ 'ಕುಮುದನದಿ'ಗೆ ಅಣೆಕಟ್ಟು ಹಾಕಿಸಿ, ನೀರನ್ನು ಒಂದು ಕಡೆ ಭದ್ರವಾಗಿ ಶೇಖರಿಸಿ ಕಾಲುವೆಗಳ ಮೂಲಕ ಕೃಷಿ ಕೈಗಾರಿಕೆಗಳಿಗೆ ನೀರು ಒದಗಿಸಿ ಊರಿನ ಉತ್ಪತ್ತಿಯನ್ನೂ ಸಮೃದ್ಧಿಪಡಿಸಿದ ಪುಣ್ಯಾತ್ಮ.

ಆದರೆ ಗಂಗಾಧರರಾಯರು ಸುಮ್ಮನೆ ಖರ್ಚು ಮಾಡಿರಲಿಲ್ಲ. ನೀರು ಬೇಕಾದವರಿಂದ ಮುಂಗಡವಾಗಿ ಹಣವನ್ನು ತೆಗೆದುಕೊಂಡಿದ್ದರು. ಕಂತಿನ ರೂಪವಾಗಿ ಯಾರು ಪಾವತಿ ಮಾಡಲಿಲ್ಲವೋ ಅಂಥವನ ಗದ್ದೆಗೆ ನೀರಿಲ್ಲ! ಇದರಿಂದ ಆ ಬಡ ರೈತರ ಗೋಳೊಂದು ರಾಯರ ಮೇಲೆ ಪುಷ್ಪವೃಷ್ಟಿಯಂತೆ ಸದಾ 'ಆಶೀರ್ವಾದ'ವನ್ನು ಕರೆಯುತ್ತಿತ್ತು. ಇತ್ತ ಗಂಗಾಧರ ರಾಯರಿಗೆ ಸಾರ್ವಜನಿಕ ಕಾರ್ಯಕ್ಷೇತ್ರದಲ್ಲಿಳಿದುದಕ್ಕಾಗಿ 'ರಾವ್ ಬದೂರ್' ನೆಂಬ ಬಿರುದೂ ಬಂದಿತ್ತು.

ರಾಧೆಗೆ ಇಲ್ಲಿ ಎಡೆ ಸಿಕ್ಕಿತು. ರಾವ್ ಬಹದ್ದೂರರು ಆಕೆಯ ಬಾಳನ್ನು ಸುಧಾರಿಸಲು ಮನಸ್ಸು ಮಾಡಿ ತನ್ನ ಮನೆಯಲ್ಲಿ ಸ್ಥಾನ ಕೊಟ್ಟರು. ಮುಸರೆ ತೊಳೆಯುವುದು; ಗುಡಿಸುವುದು; ಬಟ್ಟೆ ಒಗೆಯುವುದು; ಮಕ್ಕಳನ್ನು ಆಡಿಸುವುದು;—ಇವು ರಾಧೆಯ ನಿತ್ಯದ ಕೆಲಸ. ಆಕೆಯ ಬಳಕೆಯು ಮನೆಯಲ್ಲಿ ಎಲ್ಲವರಿಗೆ ಆಗಿದ್ದರೂ ಆಗುತ್ತಿದ್ದರೂ ಒಳಗೆ ಮಾತ್ರ ಆಕೆಗೆ ಪ್ರವೇಶವಿಲ್ಲ. ಎಲ್ಲೋ ಹಿಂಬದಿಯಿರುವ ಬಚ್ಚಲು ಮನೆಗೆ ಹೊಂದಿಕೊಂಡ ಕೊಠಡಿಯೊಂದು ಆಕೆಯ ರಾತ್ರಿಯ ವಿಶ್ರಾಂತಿ ಗೃಹ. ಮುಂಜಾನೆಯಿಂದ ಸಾಯಂಕಾಲದ ವರೆಗೆ ದುಡಿದು ಆಕೆ ಅಲ್ಲಿ ರಾತ್ರಿಯಲ್ಲಿ ಮಲಗಿಕೊಳ್ಳುವಳು.

ooo  ooo  ooo

ಮುಕುಂದರಾಯನು ಇಂಜಿನಿಯರಿಂಗ್ ಕಾಲೇಜದಲ್ಲಿ ಕಲಿಯುತ್ತಿದ್ದನು. ಈ ಸಲ ಪರೀಕ್ಷೆಗೆ ಕೂತಿದ್ದು ಉತ್ತೀರ್ಣನಾಗಿ ಮನೆಗೆ ಬಂದಿದ್ದನು. ಇಂದು ಗಂಗಾಧರರಾಯನಿಗೆ ತನ್ನ ಮಗ ಬಂದಿರುವುದೊಂದು ದೊಡ್ಡ ಹಬ್ಬ. ಒಬ್ಬನೇ ಮಗ— ತನ್ನ ಸರ್ವಸ್ವಕ್ಕೂ ಸರ್ವ ಪ್ರಥಮ ಅಧಿಕಾರಿ. ಆ ಮುಕುಂದನ ಸಹೋದರಿಯರಿಗೆ ಇಂದು ಮುಕುಂದ ತಂದಿದ್ದ ಆ ಸೀರೆ, ಈ ಸೀರೆ ಉಟ್ಟುಕೊಳ್ಳುವ ಗಡಿಬಿಡಿಯೇ ಬಹಳ. ಯಜಮಾನಿಗೆ ಅನ್ನಿಸಿತು, ರಾಧೆಗೂ ಒಂದು ಸೀರೆ ಕೊಡಬೇಕೆಂದು. ಹಾಗೆ ಕರೆದಳು. ರಾಧೆಯೂ ಆಡಿಸುತ್ತಿದ್ದ ಮಗುವನ್ನು ಕಂಕುಳಲ್ಲಿಟ್ಟುಕೊಂಡು ಓಡಿಬಂದಳು. ಮುಕುಂದ ಚಕಿತನಾಗಿ 'ಇದು ಯಾರೇ ಅಮ್ಮ?' ಎಂದು ಕೇಳಿದನು. ಯಜಮಾನಿ ರಾಧೆಯನ್ನು ಹೊಗಳಿ ಮುಕುಂದನಿಗೆ ಆಕೆಯ ಪರಿಚಯ ಮಾಡಿಸಿದಳು.

ooo  ooo  ooo

ರಾಧೆಯೂ ಮುಕುಂದರಾಯನೂ ಈಗ ಪರಸ್ಪರ ಪ್ರಣಯಿಗಳು. ಆ ನಿರಪರಾಧಿ ಬಾಲಿಕೆಯು ಮುಕುಂದನ ಬಲೆಗೆ ಬಿದ್ದಿದ್ದಳು! ಆದರೆ ಇದು ಇತರರಿಗೆ ಗೊತ್ತಿಲ್ಲದಂತೆ ಗೋಪ್ಯವಾಗಿ ನಡೆಯುತಿತ್ತು. ಶೂದ್ರಳಾದ ರಾಧೆಯನ್ನು ಉಚ್ಚಕುಲದ ಆ ಮುಕುಂದನು ತನ್ನ 'ಹೃದಯ ದೇವತೆಯಾಗುವಿ' ಎಂದು ವಂಚಿಸಿದ್ದನು. ದಿನಗಳು ಕಳೆದುವು; ತಿಂಗಳುಗಳು ದಾಟಿದುವು. ರಾಧೆಯು ಈಗ ತುಂಬಿದ ಗರ್ಭಿಣಿ! ಹಾಗೆಂದು ಆಕೆಯನ್ನು ನೋಡಿದ ಎಲ್ಲರೂ ಒಪ್ಪುತಿದ್ದರು. ಮಾತ್ರವಲ್ಲ; ಆಕೆಯನ್ನು ವ್ಯಭಿಚಾರಿಣಿಯೆಂದು ಹಳಿಯಲೂ ಹತ್ತಿದ್ದರು. ರಾವ್ ಬಹದ್ದೂರನ ಕಿವಿಗೂ ಮುಟ್ಟಿತು! ಕೋಪದಿಂದ ಕಿಡಿಕಿಡಿಯಾದನವನು. ತನ್ನ ಮನೆಯಲ್ಲಿ ಇಂಥ ಅಕೃತ್ಯ! ಶೂದ್ರ ಬಾಲಿಕೆಗೂ ತನ್ನ ಮಗನಿಗೂ ಸಂಬಂಧ? ಶುದ್ಧ ವೈದಿಕನಾದ ಅವನಿಗೆ ಇದು ತಡೆಯದಾಯಿತು. ರಾಧೆಯನ್ನು ಬಲವಂತಾಗಿ ಹೊರ ದೂಡಿಸಿದನು.

ತನಗೆ ಮುಕುಂದನಿಂದ ಈ ಅವಸ್ಥೆಯಾಯಿತೆಂದು ರಾಧೆ ಕಲ್ಲು ಕರಗುವಂತೆ ಅತ್ತು ಹೇಳಿಕೊಂಡಳು. ಆದರೆ ತನ್ನ ಆಶೆಯ ತೃಪ್ತಿಯನ್ನು ಪೂರ್ಣಮಾಡಿಕೊಂಡಿದ್ದ ಆ ಪಾಪಿ ಮುಕುಂದನು ಇದನ್ನು ಅಲ್ಲಗಳೆದನು. ರಾಧೆಗೆ ಆಕಾಶವೇ ಕಳಚಿಬಿದ್ದಂತಾಯಿತು. ತನ್ನ ಜೀವನಪುಷ್ಪವು ವಿಕಾಸವಾಗುವ ಮೊದಲೇ ಬೆಂಕಿಯ ಸ್ಪರ್ಶಮಾಡಿಸಿ ಸುಟ್ಟುಬಿಟ್ಟ ಆ ಮುಕುಂದನ ಮೇಲೆ ಸೇಡು ತೀರಿಸುವ ಇಚ್ಛೆ ಆಕೆಗೆ ಉಂಟಾಯಿತು. ಅಂದು ಇಡೀ ದಿನ ಆಕೆಗೆ ಊಟವಿಲ್ಲ. ಸಾಲದುದಕ್ಕೆ ವರ್ಷಕಾಲದ ಮಳೆಗಾಳಿ; ಸಿಡಿಲು ಮಿಂಚು; ಗಾಢಾಂಧಕಾರದ ಕತ್ತಲೆ; ರಾಧೆ-ಗರ್ಭಿಣಿಯಾದ ಆ ರಾಧೆ, ಬಸವಳಿದು, ಶಕ್ತಿಹೀನಳಾಗಿದ್ದರೂ ಆ ಭೀಕರವಾದ ಅಂಧಕಾರದಲ್ಲಿ ಒಬ್ಬಳೆ ನೆಲೆಯಿಲ್ಲದೆ ಹೋಗುತ್ತಿದ್ದಳು. ಆಕೆಯನ್ನು ರಕ್ಷಿಸುವವರಾರು? ದೇವರೊಬ್ಬನೇ!

ಂಂ ಂಂ ಂಂ

ವರ್ಷಗಳು ಕಳೆದುವು. ಎಷ್ಟೆಂದು ಗೊತ್ತಿಲ್ಲ. ೩೦-೩೫ ವರ್ಷ ಪ್ರಾಯದ ನಡುಹರೆಯದ ಹೆಂಗಸೊಬ್ಬಳು ಆ ಊರವರನ್ನು ತನ್ನ ಗಾಯನ ನರ್ತನದಿಂದ ಮಂಕುಮಾಡುತ್ತಿರುವಳು. ಆಕೆಗೆ ಅಷ್ಟು

ಪ್ರಾಯ ಸಂದಿದ್ದರೂ ಇನ್ನೂ ಆಕೆ ೧೮ ವರ್ಷದವಳಂತಿದ್ದಳು. ಆಕೆಯ ಖ್ಯಾತಿಯನ್ನು ಕೇಳಿ ಹಣ್ಣು ಮುದುಕ ಗಂಗಾಧರ ರಾಯರಿಗೂ ಇಚ್ಛೆಯಾಯಿತು—ಅಂಥಾ ವೇಶ್ಯೆಯನ್ನೊಮ್ಮೆ ನೋಡಬೇಕೆಂದು. ಹಾಗೇ ಗೃಹಸ್ಥ ನಡೆದೇ ಬಿಟ್ಟ:—ಕೊನೆಗೆ ಬಲೆಗೆ ಬಿದ್ದ.

ಆ ನಾಯಕಸಾನಿಯ ಮಗಳೊಬ್ಬಳು—'ಸರೋಜ'ಯೆಂದಾಕೆಯ ಹೆಸರು. ಆ ಸೌಂದರ್ಯವು ಇನ್ನಾರಿಗೂ ಇಲ್ಲ! ಆ ಸೌಂದರ್ಯಕ್ಕೆ ತಕ್ಕಂತೆ ಗುಣ. ಮುಕುಂದರಾಯನಿಗೆ ಆಕೆಯ ಮೇಲೆ ಕಣ್ಣು ಬಿತ್ತು ಈಗ ಮನೆಯ ಅಧಿಕಾರವೆಲ್ಲವನ್ನೂ ರಾವ್‌ಬಹದ್ದೂರನು ಮಗನ ಕೈಯಲ್ಲಿ ಕೊಟ್ಟು ಬಿಟ್ಟಿದ್ದನು. ಮುಕುಂದನಿಗೆ ಅನ್ನಿಸಿತು,– ತಾಯಿ ಮಗಳನ್ನೊಮ್ಮೆ ತನ್ನ ಮನೆಗೆ ಕರೆಸಬೇಕೆಂದು. ಅಂತೂ ಆಮಂತ್ರಣವೂ ಹೋಯಿತು, ಬರುವೆವೆಂಬ ಒಪ್ಪಿಗೆಯೂ ಬಂತು.

ಮುಕುಂದರಾಯನ ಮನೆಯಲ್ಲಂದು ಭಾರಿ ಔತಣ! ಸರೋಜಾದೇವಿಯು ದಿವ್ಯವಾದ ಆಭರಣ ಪೋಷಾಕುಗಳಿಂದ ಅಲಂಕೃತಳಾಗಿ ತನ್ನ ಸುಮಧುರ ಕಂಠದಿಂದ ಹಾಡುತ್ತಾ ನರ್ತಿಸುತ್ತಿರುವಳು. ಆಕೆಯ ತಾಯಿ ದೂರದಲ್ಲಿ ಗಂಗಾಧರರಾಯನೊಡನೆ ಕುಳಿತಿದ್ದು, ಒಮ್ಮೆ ಮುಕುಂದನನ್ನೂ ಮಗದೊಮ್ಮೆ ಮಗಳನ್ನೂ ನೋಡಿ ಮರುಗುತ್ತಿರುವಳು. ಆ ಸಂತೋಷದ ಸಮಯದಲ್ಲೂ ನಿಗೂಢವಾದುದೊಂದು ದುಃಖವು ಆಕೆಯನ್ನಾವರಿಸಿತ್ತು. ಆದರೆ ಯಾರಿಗೂ ತಿಳಿಯದಂತೆ ಅದನ್ನು ಮರೆಮಾಡಿದ್ದಳು.

೦೦ ೦೦ ೦೦

ಹಠಾತ್ತಾಗಿ ಹೊರಗೆ ಭಾರಿ ಮಳೆಗಾಳಿ!– ಸಿಡಿಲು ಮಿಂಚು! ನರ್ತನವು ನಿಲ್ಲಿಸಲ್ಪಟ್ಟಿತು. ಬಂದ ಅತಿಥಿಗಳು ಬೇಗನೇ ಮನೆಯ ದಾರಿ ಹಿಡಿದರು. ಸರೋಜಳೂ ಆಕೆಯ ತಾಯಿಯೂ ಅಲ್ಲೇ ಅಂದು ಇರುವಂತಾಯಿತು. ಗಂಗಾಧರರಾಯನು ಆತನ ಮನೆಯ ಸಮೀಪದಲ್ಲೇ ಇದ್ದ ಆ ಅಣೆಕಟ್ಟಿನ ದುರಸ್ತಿಮಾಡದೆ ಇದ್ದುದರಿಂದ ಅದಕ್ಕೆ ಎಲ್ಲಿ ಅಪಾಯ ಸಂಭವಿಸುವುದೋ ಎಂದು ಅದನ್ನು ನೋಡಿಕೊಂಡು ಬರಲು ಹೋದನು.

ತಾಯಿಯನ್ನು ಹುಡುಕುತ್ತಾ ಸರೋಜಳು ಒಂದು ಕೊಠಡಿಯನ್ನು ಹೊಕ್ಕಳು. ಆದರೆ ತಾಯಿ ಅಲ್ಲಿಲ್ಲ. ಹುಡುಕುತ್ತಿದ್ದಂತೆ—ಎದುರಿಗೆ ಮುಕುಂದ. ಹಠಾತ್ತಾಗಿ ಚುಂಬಿಸಿದನು.

ಆಗಲೇ ಕೇಳಿಸಿತು ತೀಕ್ಷ್ಣ ಕಂಠದಿಂದ 'ಕಾಮುಕ! ಅವಳು ನಿನ್ನ ಮಗಳು!'

ಭಯದಿಂದಲೂ ಗಾಬರಿಯಿಂದಲೂ ಮುಕುಂದರಾಯ ಸುತ್ತಲೂ ನೋಡಿದ. ಯಾರೂ ಕಾಣಿಸರು. ಸರೋಜಳು ಮೂರ್ಛೆಬಿದ್ದಿರುವಳು.

ಪುನಃ ಅದೇ ಮಾತು 'ನಿನ್ನ ಮಗಳು!'

ಅಷ್ಟರಲ್ಲೇ ಭಯಂಕರವಾದ ಸಿಡಿಲು! ಪ್ರಳಯ ಕಾಲವು ಸಮೀಪಿಸಿತೋ ಎಂದು ಜನರೆಲ್ಲ ಭಯವಿಹ್ವಲರಾಗಿ ನಡುಗುತ್ತಿದ್ದಂತೆ ಅಣೆಕಟ್ಟು ಸಿಡಿಲ ಆಘಾತದಿಂದ ಕುಸಿಯಿತು. ಆಚೆಕಡೆ ಸಮೃದ್ಧವಾಗಿದ್ದು ಹೊರ ಧುಮುಕಲಿಕ್ಕೆ ನೋಡುತ್ತಿದ್ದ ಕೃಷ್ಣಜಲರಾಶಿಯು ರಭಸದಿಂದ ಕೆಳಗೆ ಧುಮುಕಿತು. ಇದೆಲ್ಲವೂ ಒಂದರೆಗಳಿಗೆಯಲ್ಲಿ! ಮುಕುಂದನು ಸರೋಜಳ ಮೇಲೆ ಅತ್ಯಾಚಾರ ಮಾಡಿದ ಸಮಯದಲ್ಲಿ! 'ನಿನ್ನ ಮಗಳೆ'ಂದು ಮಾತು ಹೊರಟ ಆ ಕಾಲದಲ್ಲಿ! ಕೆಳಗಿನ ಪ್ರದೇಶದಲ್ಲಿದ್ದ ಮನೆಮಠ, ಗದ್ದೆ ಬಯಲು, ಮರ, ಪೊದೆ, ಎಲ್ಲಾ ಜಲಮಯ! ಮಾನವರು ತಮ್ಮದೆಂದು ಹೆಮ್ಮೆ ಪಡುತಿದ್ದ ಶಿಲಾಶಾಶ್ವತವೆಂದು ತಿಳಿದಿದ್ದ ಆಸ್ತಿಪಾಸ್ತಿಗಳೆಲ್ಲವೂ ಪ್ರಕೃತಿಯ ಪ್ರಕೋಪಕ್ಕೆ ತುತ್ತಾಗಿ ಕ್ಷಣದೊಳಗೆ ಸಂಪೂರ್ಣ ಧ್ವಂಸ! ಮತ್ತದೋ ಅಲ್ಲಿ! ಗಂಗಾಧರರಾಯನ ಶವ! ನೀರಿನ ಸೆಳತದಲ್ಲಿ!

ಆ ಭಯಂಕರ ಅಂಧಕಾರದಲ್ಲಿ ಒಂದು ಮರದ ಕೊರಡಿನ ಮೇಲೆ ಆ ನಾಯಕಸಾನಿ ತನ್ನ ಮಗಳನ್ನು ಹಾಕಿ ಕೊಂಡಿರುವಳು. ಸರೋಜೆಯು ಇನ್ನೂ ಪ್ರಜ್ಞಾವಸ್ಥೆಗೆ ಬಂದಿರಲಿಲ್ಲ. ಮುಕುಂದನು ಸಮೀಪದಲ್ಲೆ ಮುಳುಗುತ್ತಾ ತೇಲುತ್ತಾ ಜೀವನ—ಮರಣಗಳ ಸೆಳೆದಾಟದಲ್ಲಿರುವನು. ಪ್ರವಾಹವು ಆ ಮೂವರನ್ನೂ ತುದಿಮೊದಲಿಲ್ಲದ ಪ್ರದೇಶಕ್ಕೆ ಕೊಚ್ಚಿಕೊಂಡು ಎಳೆದುಕೊಂಡು ಹೋಗುತ್ತಿದೆ! ನಾಯಕಸಾನಿ ಏನೋ ಕನವರಿಸುತ್ತಿರುವಳು. ಮುಕುಂದನು ಜೀವದಾಸೆಯಿಲ್ಲದೆ ಅದನ್ನು ಕೇಳುತ್ತಿರುವನು— 'ನಾನು ಆ ರಾಧೆ! ಈಕೆ ನನ್ನ ಮಗಳು. ಇದು ನಿನಗೆ ಪ್ರಾಯಶ್ಚಿತ್ತ.'

**'ಚಂದ್ರಗುಪ್ತ'**
(ಕಂಠೀರವ)

ನವಯುಗ ಪ್ರೆಸ್, ಉಡುಪಿ.

| | | | | |
|---|---|---|---|---|
| 31 | ಸಪ್ತಸಾಗರೆ | (ಎಸ್. ವೆಂಕಟರಾಜ) ಕತೆಗಳು | 0 | 12 |
| 32 | ಜಮೀನ್ದಾರ | (ಹೊಸಮನೆ ಗುಡ್ಡಪ್ಪ) ಕಾದಂಬರಿ | 1 | 8 |
| 33 | ಬಾಳಿನ ಬೆಡಗು | (ಯು. ನಾರಾಯಣ ಭಟ್ಟ) ಕಾದಂಬರಿ | 1 | 4 |

## *ಅಂತರಂಗದ ಪ್ರಕಟಣೆಗಳು*

| | | | | |
|---|---|---|---|---|
| 1 | ಗೂರ್ಖರ ಬಿರುದಾವಳಿ (ಪತ್ರಗಳು) | ಎಂ. ವಿ. ಹೆಗ್ಡೆ | 0 | 3 |
| 2 | ಆ ಸುದ್ದಿ (ಕತೆ) | ,, | 0 | 4 |
| 3 | ಹೈದರಾಬಾದ್ ವಿಜಯ (ಯಕ್ಷಗಾನ ನಾಟಕ) | ,, | 0 | 4 |
| 4&5 | ಸೆರೆಯಾಳು (ನೀಳ್ಗತೆ) | ಕುಲಕರ್ಣಿ ಬಿಂದು ಮಾಧವ | 0 | 7 |
| 6 | ಗಾದೆಯ ಗಾಂಧಿ (ಸೂಕ್ಷ್ಮ ಪರಿಚಯ) | ಎಂ. ವಿ ಹೆಗ್ಡೆ | 0 | 3 |
| 7 | ಶಾಂತಿಯ ಮಡಲಲ್ಲಿ (ನೀಳ್ಗತೆ) | ಪ. ಸು. ಭಟ್ಟ | 0 | 4 |
| 8 | ಬಲಿ ಪೀಠದಲ್ಲಿ (ನಾಟಕ) | ಆರ್. ಕಲ್ಯಾಣಮ್ಮ | 0 | 5 |
| 9 | ಅಗಲಿದ ಅಕ್ಕ ಸರೋಜಿನಿ (ಜೀವನ) | ಎಂ. ವಿ. ಹೆಗ್ಡೆ | 0 | 3 |
| 10 | ನನ್ನ ಹೆಂಡತಿ (ಕತೆಗಳು) | ಮಾಳಕೋಡ ನಾರಾಯಣ ಹೆಗ್ಡೆ | 0 | 4 |
| 11 | ಪುಣ್ಯ ಫಲ (ನೀಳ್ಗತೆ) | ಗಿರಿಬಾಲೆ | 0 | 4 |
| 12 | ಸುಖದ ದಾರಿ (ವೈರಾಗ್ಯ ಶತಕ) | ಕೆ. ಎ. ದೇವದಾಸ | 0 | 3 |
| 13 | ಸುಕಾಂತ (ಕತೆ) | ಮೀ. ಚ. ಹಿತ್ತಲಮನಿ | 0 | 4 |
| 14 | ಪಂಚಮುಖಿ (ಪ್ರಬಂಧಗಳು) | ಬಿ. ಎಚ್. ಶ್ರೀಧರ | 0 | 5 |
| 15 | ಜಾತೀ ಭೂತಕ್ಕೆ ಬಲಿ (ಕತೆ) | ಕೆ. ದೇವಕಿ | 0 | 4 |
| 16 | ಜನಸೇವೆಯ ಸೋಗಿನಲ್ಲಿ (ಕತೆ) | ಕೆ. ಶಿವರಾಂ ಶೆಟ್ಟಿ | 0 | 4 |
| 17 | ನಾ ಕಂಡ ಅವಳು (ಕತೆ) | ಶ್ರೀ. ವೆಂ. ಅಡಿಗ, ಶ್ರೀಪತಿ | 0 | 5 |
| 18 | ತ್ರಿವೇಣಿ (ಪ್ರಬಂಧ) | ವಿವಿಧ ಲೇಖಕರು | 0 | 3 |
| 19 | ನಿಲುವಂಗಿ (ಕತೆ) | ಎಸ್. ಸುಬ್ಬರಾಮಯ್ಯ, ಬಿ.ಎ.ಆನರ್ಸ್ | 0 | 4 |
| 20 | ಬಾಡಿಗೆ ಮನೆ ಮತ್ತು ಮುಸುಕು (ನಾಟಕಗಳು) | | 0 | 3 |
| 21 | ವರ್ತಮಾನ ಕಾಲದ ನಾಲ್ವರು ಮಹಾನುಭಾವರು | (ಕು. ಶಿ.) | 0 | 4 |
| 22 | ದೇವರ ನಾಮ ಮತ್ತು ಅದರ ಸಾಧನೆ | (ಬಾಪಟ ವಿನಾಯಕಶರ್ಮ) | 0 | 3 |
| 23 | ಎರಡು ಕತೆಗಳು (ಸಂಕಲನ) | | 0 | 3 |
| 24 | ಸರಸ-ವಿರಸ (ವಿನೋದ ಚಿತ್ರಗಳು) | ಅ. ಗೌ. ಕಿನ್ನಿಗೋಳಿ | 0 | 4 |
| 25 | ಹೃದಯೇಶ್ವರಿ (ಕತೆ) | ಪ್ರೇಮಚಂದ್ರ | 0 | 5 |
| 26-27 | ವಿವಿಧ ವಿಷಯ ಕೋಶ ೧, ೨ | ಟಿ. ಚಂದ್ರರಾಜ ಶೆಟ್ಟಿ | 0 | 6 |
| 28-30 | ನುಡಿ ಮುತ್ತುಗಳು ೧, ೨, ೩ | ಎಂ. ವಿ. ಹೆಗ್ಡೆ | 0 | 9 |
| 31-34 | ಕುಲವಿಲ್ಲದ ಹೆಣ್ಣು (ಕಾದಂಬರಿ) | ಪಿ. ವೆಂಕೋಬಾಚಾರ್ಯ | 2 | 0 |
| 35 | ತವರುಮನೆಯಿಂದ (ಪತ್ರಗಳು) | ಸೌ। ಶಾರದಾ ದೇವಿ | 0 | 4 |
| 36-38 | ಭಾಗ್ಯ ಲಕ್ಷ್ಮಿ (ನಾಟಕ) | ಬೆಳ್ತಂಗಡಿ ಲಕ್ಷ್ಮಣ ರಾವ್ | 1 | 4 |
| 39 | ಯುಗವಾಣಿ (ಕವನಗಳು) | ಕು. ಶಿ. ಹರಿದಾಸ ಭಟ್ | 0 | 8 |
| 40-41 | ಸ್ತ್ರೀ ಹೃದಯ (ಕತೆ) | ವಸಂತಿ ಬಾಯಿ ಪಡುಕೋಣೆ | 0 | 4 |
| 42 | ದ್ವೇಷ (ಕತೆ) | ಶ್ರೀನಿವಾಸ ಮೂರ್ತಿ ಗೊರೂರು | 0 | 4 |
| 43 | ಎರಡು ಏಕಾಂಕ ನಾಟಕಗಳು | ಎಸ್. ವೆಂಕಟರಾಜ | 0 | 4 |
| 44 | ಪ್ರಜಾಪ್ರಭುತ್ವವನ್ನು ಕುರಿತು | ಶಿವರಾಮ ಕಾರಂತ | 0 | 8 |
| 45 | ಕಲಾವಿದನ ದಿನಚರಿ (ಜೀವನ ವಿಮರ್ಶೆ) | ಎಸ್ಸೆಲ್ | 0 | 3 |

| | | | |
|---|---|---|---|
| 46 ಆಧುನಿಕ ಭಾರತ (ಪ್ರಹಸನಗಳು) | ಹುರುಳಿ ಭೀಮ ರಾವ್ | 0 | 4 |
| 47 ಕಾಲವೇ ಬದಲಾಗಿದೆ (ಕತೆ) | ಕು. ಶಿ. ಹರಿದಾಸ ಭಟ್ | 0 | 4 |
| 48 ಭಾರತದ ಸಾಹಿತ್ಯ ಮತ್ತು ಕಲೆಗಳು | ವಿಘ್ನೇಶ್ವರ ಶರ್ಮ | 0 | 4 |
| 49 ಸ್ತ್ರೀ ಸ್ವಾತಂತ್ರ್ಯ ಬೇಕೆ? (ಪ್ರಬಂಧ) | ವೈದ್ಯ ವಿನಾಯಕ ರಾವ್ | 0 | 5 |
| 50 ಹಂಬಲ (ಕತೆ) | ಕೃಷ್ಣ ಮೂರ್ತಿ ಕಿತ್ತೂರ | 0 | 4 |
| 51 ಭಾರತ ಚಿತ್ರದ ಅಂಚೆ ಚೀಟುಗಳು | ಟಿ. ಚಂದ್ರರಾಜ ಶೆಟ್ಟಿ | 0 | 3 |
| 52 ಅಂತರಂಗದ ಕತೆಗಳು (ಕಥಾಸಂಕಲನ) | | 1 | 4 |
| 53 ತ್ರಿಶೂಲ (ನಾಟಕಗಳು) | ವಸುದೇವ ಭೂಪಾಲಂ | 0 | 5 |
| 54 ಪ್ರೇಮ ಪ್ರವಾಹ (ಕಥಾಸಂಗ್ರಹ) | | 0 | 8 |
| 55 ಪುಸ್ತಕ ಪುರಾಣ | ಕು. ಶಿ. ಹರಿದಾಸ ಭಟ್ | 0 | 4 |
| 56 ಹಳ್ಳಿಯಲ್ಲಿ ನಡೆದ ನಾಟಕ | ಕೆ. ಎ. ದೇವದಾಸ | 0 | 3 |
| 57 ನೆರೆಯ ಗಾಂಧಾರ (ಪರಿಚಯ) | ಸುಬ್ರಾವ್ ಕೃಷ್ಣ ಹೆಗ್ಡೆ | 0 | 3 |
| 58 ಮಾತಿನ ಯುಗದ ಮಹಾಪ್ರಭಾವ | ವಿಘ್ನೇಶ್ವರ ಶರ್ಮ | 0 | 3 |
| 59 ವಿಜ್ಞಾನದ ಬೆಳವಣಿಗೆ | ಟಿ. ಚಂದ್ರರಾಜ ಶೆಟ್ಟಿ | 0 | 4 |
| 60–61 ಡಾ। ಹರ್ಡಿಕರ(ಪರಿಚಯ) | ನಾಗೇಶ ರಾಮಚಂದ್ರ ದೇಸಾಯಿ | 0 | 5 |
| 62-63 ತೆಂಗಿನ ತವರು(ಜಿಲ್ಲಾ ಪರಿಚಯ) | ಯು. ನಾರಾಯಣ ಭಟ್ | 0 | 6 |
| 64–65 ಪ್ರಾಯಶ್ಚಿತ್ತ (ನಾಟಕಗಳು) | ಎಂ. ಗೋವಿಂದ ರಾವ್, | 0 | 4 |
| 66 ಪ್ರಭಾ (ನೀಳ್ಗತೆ) | ಕು। ಪದ್ಮಾ | 0 | 4 |
| 67–68 ಶವಗಳ ಸಾಗಾಟ (ಪತ್ತೇದಾರಿ) | ಸುಬ್ರಾವ್ ಕೃಷ್ಣ ಹೆಗ್ಡೆ | 0 | 12 |
| 69 ಸ್ವಪ್ನ ಲೋಕ (ಸ್ವಪ್ನಗಳ ಕುರಿತಾದ ವಿವರ) | ಕಾರ್ತಿಕೇಯ | 0 | 8 |
| 70–71 ಮನೆಯ ಹೊರಗಿನ ಮಹಾಜೀವಗಳು( | ಕು. ಶಿ. ಹರಿದಾಸ್ ಭಟ್ | 0 | 6 |
| 72–75 ಫಂಟಮಾರಾ (ಇಟಾಲಿಯನ್ ಕಾದಂಬರಿ) | ,, | 2 | 0 |
| 76–77 ಮಾರ್ಪಾಟ (ನಾಟಿಕ) | ಡಾ। ಕೃಷ್ಣ | 0 | 5 |
| 78 ಭಾರತದ ರಾಷ್ಟ್ರಗೀತೆ | ಟಿ. ಚಂದ್ರರಾಜ ಶೆಟ್ಟಿ | 0 | 3 |
| 79 ಆದರ್ಶ ಆರೋಗ್ಯ ಖಾತೆ | ವಿನಾಯಕ ರಾವ್ ಬಾಪಟ | 0 | 2 |
| 80 ನಮ್ಮ ಬಹು ದೊಡ್ಡ ಶತ್ರು (ಪ್ರಬಂಧ) | ಕೆ. ಶಿವರಾಮ ಶೆಟ್ಟಿ | 0 | 4 |
| 81 ಚೌತಿ (ನಾಟಕಗಳು) | | 0 | 4 |
| 82 ಕತ್ತು ಕೊಯ್ದವರಾರು(ಪತ್ತೆದಾರಿ) | ಕೆ. ಎಸ್. ರಾಮಕೃಷ್ಣ ಮೂರ್ತಿ | 0 | 6 |
| 83 ಕೈಲಾಸ (ಕತೆ) | ಟಿ. ಚಂದ್ರರಾಜ ಶೆಟ್ಟಿ | 0 | 2 |
| 84 ಸಮಾಜದ ಅಗ್ನಿಕುಂಡ (ನೀಳ್ಗತೆ) | ಪಡುಕೋಣೆ ವಸಂತಿ ಬಾಯಿ | 0 | 4 |
| 85 ಬೆಳ್ಳಿ ಹಬ್ಬ (ರಜತೋತ್ಸವ ಸಂಚಿಕೆ) | | 0 | 4 |
| 86 ಉಷಾ (ಕಾದಂಬರಿ) | ಕು। ಪದ್ಮಾ | 0 | 4 |
| 87 ವಿಧಿ ಲೀಲೆ (ನೀಳ್ಗತೆಗಳು) | ಜಿ. ಮೈಲಾರ್ರಾವ್ | 0 | 4 |
| 88 ಪರಮಾಣು ಪ್ರಪಂಚ(ಲಲಿತಪ್ರಬಂಧಗಳು) | ಕೆ. ಗುರುರಾಜ ಉಡುಪ | 0 | 4 |
| 89 ನೀತಿ ವಿನೋದ ಕತೆಗಳು | ವೀರಪ್ಪ ಯುಗಟಿ | 0 | 12 |
| 90 ಸಾಹಸ ಭೀಮ ವಿಜಯ (ಯಕ್ಷಗಾನ) | ಕೆ. ಪಿ. ವೆಂಕಪ್ಪ ಶೆಟ್ಟಿ | 0 | 8 |
| 91 ಭಾರತದ ಗುರುಕುಲ ( ,, ) | ,, | 0 | 6 |
| 92 ಲತ್ತಪಗಡೆ (ಯಕ್ಷಗಾನ) | ಕೆ. ಪಿ. ವೆಂಕಪ್ಪ ಶೆಟ್ಟಿ | 0 | 6 |
| 93 ಸೇವಾಪಥ (ನಾಟಕ) | ಸೇಟ್ ಗೋವಿಂದ ದಾಸ | 0 | 8 |

